# ಹಳೆಯ ವಿದ್ಯಾರ್ಥಿಗಳ ಸಂಘ

## ಶ್ರೀ ಸಿದ್ಧಗಂಗಾ ಕ್ಷೇತ್ರ.

ಶ್ರೀ ಗುರುಕುಲದ ಹಳೆಯ ವಿದ್ಯಾರ್ಥಿಗಳ ಸಂಘದ ಕಾರ್ಯಕಾರಿ ಸಮಿತಿಯು ತಾ. 9-7-83 ರಂದು ಸಭೆ ಸೇರಿ, ಸಂಘವ ಸರ್ವ ಸದಸ್ಯರುಗಳು ಸಂಘದ ಸದಸ್ಯತ್ವಕ್ಕಾಗಿ ವರ್ಷಂಪ್ರತಿ ಸಲ್ಲಿಸುವ ವಾರ್ಷಿಕ ಶುಲ್ಕ ಹದಿನೈದು ರೂಗಳಿಗೆ ಬದಲಾಗಿ ಒಂದು ನೂರು ಒಂದು ರೂಗಳನ್ನು ಸಲ್ಲಿಸಿ ಆಜೀವ ಸದಸ್ಯತ್ವ ಪಡೆದುಕೊಳ್ಳುವ ಅವಕಾಶವನ್ನು ಕಲ್ಪಿಸಿರುತ್ತೆ. ಪ್ರಯುಕ್ತ ಎಲ್ಲಾ ಹಳೆಯ ವಿದ್ಯಾರ್ಥಿ ಮಿತ್ರರುಗಳು ಈ ಸದವಕಾಶವನ್ನು ಪಡೆದುಕೊಂಡು ಸಂಘದ ಅಭಿವೃದ್ಧಿಗೂ ಹಾಗೂ ಸಂಘದ ಬೆಳ್ಳಿಹಬ್ಬದ ಆಚರಣೆಯ ಯಶಸ್ವಿಗೂ ಶ್ರಮಿಸಬೇಕೆಂದು ಕಾರ್ಯಕಾರಿ ಸಮಿತಿಯುವರು ವಿನಂತಿಸಿಕೊಂಡಿರುತ್ತಾರೆ.

ಈ ಮೇಲಿನ ಕಾರ್ಯಕಾರಿ ಸಮಿತಿಯ ತೀರ್ಮಾನಕ್ಕೆ ಸಮ್ಮತಿಸಿ ಅನೇಕ ಮಿತ್ರರುಗಳು ಈಗಾಗಲೇ ಒಂದು ನೂರ ಒಂದು ರೂ ಗ ಳ ನ್ನು ಸಂಘದ ಕಾರ್ಯಾಲಯಕ್ಕೆ ಕಳಿಸಿ ಆಜೀವ ಸದಸ್ಯತ್ವ ಪಡೆದಿರುತ್ತಾರೆ. ಸಂಘದ ಯಾವತ್ತೂ ಕಾರ್ಯಗಳಿಗೂ ತಮ್ಮ ಶಕ್ತಿಮೀರಿ ಶ್ರಮಿಸಲು ಭರವಸೆಯಿತ್ತು ಯಶಸ್ಸನ್ನು ಕೋರಿರುತ್ತಾರೆ. ಆಜೀವ ಸದಸ್ಯತ್ವ ಪಡೆದುಕೊಂಡಿರುವವರ ವಿಳಾಸಗಳನ್ನು ಸಿದ್ಧಗಂಗಾ ಮಾಸಿಕದಲ್ಲಿ ಇನ್ನು ಮುಂದೆ ಕ್ರಮವಾಗಿ ಪ್ರಕಟಿಸಲಾಗುತ್ತೆ. ತಾವೂ ಆಜೀವ ಸದಸ್ಯತ್ವ ಪಡೆದು ತಮ್ಮೊಂದಿಗಿದ್ದ ಹಳೆಯ ಮಿತ್ರರುಗಳಿಗೂ ಈ ನಮ್ಮ ಮನವಿಯನ್ನು ತಿಳಿಯಪಡಿಸಲು ನಮ್ಮ ಕಳಕಳಿಯ ಪ್ರಾರ್ಥನೆ.

### ಸಂಘದ ಆಜೀವ ಸದಸ್ಯತ್ವ ಪಡೆದಿರುವ ಹಳೆಯ ವಿದ್ಯಾರ್ಥಿ ಮಿತ್ರ ಬಳಗ

ಸರ್ವಶ್ರೀ

೧. ಡಾ|| ಎಂ. ಎಸ್. ಚನ್ನಬಸಪ್ಪ, ಎಂ.ಎ., ಪಿ.ಹೆಚ್.ಡಿ.,
ಗಣಿತಶಾಸ್ತ್ರ ಪ್ರಾಚಾರ್ಯರು, ಕೆ. ಆರ್. ಇ. ಕಾಲೇಜು, ಸೂರತ್ಕಲ್,
ಶ್ರೀನಿವಾಸ ಪುರಂ ಅಂಚೆ, ದಕ್ಷಿಣಕನ್ನಡ ಜಿಲ್ಲೆ—[illegible]

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ—೨೧ ಸಂಚಿಕೆ-೧೧ ಅಕ್ಟೋಬರ್, ೧೯೮೩

## ಗುರು ಸಿದ್ಧಲಿಂಗೇಶ

ಧರೆಯೊಳಗೆ ವೀರಶೈವಾಚಾರವಡಗಿತ್ತು ।
ಕರುಣದಿಂ ನೀವೆ ಚಿತ್ತೈಸಿ ಷಟ್ಸ್ಥಲವನು ।
ದ್ಧರಿಸೆಂದು ಸಾರದಂ ಬಿನ್ನವಿಸಲೀಶಂ ನಿರಂಜನಗಣೇಶನೊಡನೆ ॥
ವರಗಣೇಶ್ವರರನೇಳ್ನೂರ್ವರಂ ಕೂಡಿಕೊಂ ।
ಡಿರದೆ ಭೂಮಿಯೊಳುದಿಸಿ ಜಂಗಮಸ್ಥಲವಾಂತು ।
ಪರಮಷಟ್ಸ್ಥಲವನುದ್ಧರಿಸೆಂದು ಕಳುಹಲವರೊಡಗೂಡಿ ಭೂಮಿಗಿಳಿದು ॥

ಪರಮಗೋಸಲಚನ್ನಬಸವೇಶ್ವರನ ಹಸ್ತ ।
ಸರಸಿರುಹದಿಂದಾ ನಿರಂಜನ ಗಣೇಶ್ವರಂ ।
ಹರುಷದಿಂದೊಗೆದು ಸಿದ್ಧೇಶನಾಮವನಾಂತು ಕಗ್ಗೆರೆಯ ತೋಂಟಕೈದಿ।
ಇರದೆ ನಂಬ್ಯಣ್ಣನೆಂಬಾತನತಿಭಕ್ತಿಯಿಂ ।
ಶರಣೆಂದು ಭಿಕ್ಷಕ್ಕೆ ಬಿನ್ನವಿಸಿಕೊಂಡೀಗ ।
ತಿರುಗಿ ಬಂದಾನೆ ಕರೆಕೊಂಡು ಪೋದಪನೆಂದು ಕಗ್ಗೆರೆಗೆ ಪೋಗಲಾಗ॥

....ವಿರೂಪಾಕ್ಷ ಪಂಡಿತ.

# ಈ ಸಂಚಿಕೆಯಲ್ಲಿ



# ಶ್ರೀವಾಣಿ

ಸಾಮಾಜಿಕ ಪ್ರಾಣಿಯಾದ ಮಾನವನು ಸಮಾಜದ ಅವಿಭಾಜ್ಯ ಅಂಗವಾಗಿ ಹುಟ್ಟಿ ಅನೇಕ ಋಣಗಳನ್ನು ಹೊತ್ತು ಬಂದಿದ್ದಾನೆ. ದೇವ, ಪಿತೃ, ಋಷಿ ಸ್ಯ, ಭೂತ, ರಾಷ್ಟ್ರಋಣಗಳು ಕೆಲವು ಮುಖ್ಯವಾದವುಗಳಾಗಿವೆ. ಮಾನವ ಕುಲದ ಉದ್ಧಾರಕ್ಕಾಗಿ ನೆಲ, ಜಲ, ಗಾಳಿ, ಬೆಂಕಿ, ಆಕಾಶಾದಿ ಭೂತ ಹಾಗೂ ಭೌದ್ಧಿಕವಾದ ಅನೇಕ ಸಂಪತ್ತುಗಳನ್ನು ಕರುಣಿಸಿರುವ ದೇವದೇವನಿಗೆ ಮಾನವ ಸದಾ ಋಣಿಯಾಗಿರಬೇಕು. ಕೃತಜ್ಞನಾಗಿರಬೇಕು. ಏಕೆಂದರೆ ಕೃತಜ್ಞತೆಯೇ ನಿಜವಾದ ಪೂಜೆ. ಹೀಗೆ ದೇವನನ್ನು ಪೂಜಿಸುವುದರಿಂದ, ಭಜಿಸುವುದರಿಂದ, ಅವನು ಅಹುದಹುದೆನ್ನುವ ರೀತಿಯಲ್ಲಿ ನಡೆದುಕೊಳ್ಳುವುದರಿಂದ ದೇವ ಋಣವನ್ನು ತೀರಿಸಿದಂತಾಗುತ್ತದೆ. ಆದರೆ ಮಾನವ ಇಂದು ಇದಕ್ಕೆ ಪ್ರತಿಕೂಲ ಪ್ರವೃತ್ತಿವುಳ್ಳವನಾಗಿದ್ದಾನೆ. ಕಿಂಚಿತ್ತು ಕೃತಜ್ಞತೆ ಇಲ್ಲದವನಾಗಿದ್ದಾನೆ. ಅಂತೆಯೆ ದೇವರ ದಾಸಿಮಯ್ಯನವರು ಹೇಳದ್ದು: ಇಳೆ ನಿಮ್ಮದಾನ, ಬೆಳೆ ನಿಮ್ಮದಾನ ಸುಳಿದು ಬೀಸುವ ವಾಯು ನಿಮ್ಮ ದಾನ ....ನಿಮ್ಮ ದಾನವನ್ನುಂಡು ಅನ್ಯರನ್ನು ಹೊಗಳುವಡೇನ ಹೇಳಲಿ ಎಂದು ಆದರೆ ಮಾನವ ತನ್ನ ಬದುಕಿನಲ್ಲಿ ಮಂಗಳವನ್ನು ಕಾಣಬೇಕಾದರೆ ದೇವದೇವನಿಗೆ ಕೃತಜ್ಞನಾಗಿದ್ದುಕೊಂಡು ಋಣವಿಮುಕ್ತನಾದಾಗ ಮಾತ್ರ ಸಾಧ್ಯ.

# "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

**ಪಂ|| ಚನ್ನಪ್ಪ ಎರೇಸೀಮೆ**

* * *

ಸಹ ಸಂಪಾದಕರು

**ಪಿ. ಎಸ್. ಚಂದ್ರಶೇಖರಯ್ಯ**

**ಬಸವರಾಜು**

* * *

ಜಾಹೀರಾತು ವಿಭಾಗ

**ಎಂ. ರೇಣುಕಾರಾಧ್ಯ**

* * *

ಪ್ರಸಾರ ವಿಭಾಗ

**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು

**ಹೆಚ್.ಬಿ. ಗಂಗಾಧರಯ್ಯ**

**ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ**

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

**ಶ್ರೀ ಸಿದ್ಧಗಂಗಾ ಕ್ಷೇತ್ರ**

## ಚಂದಾ ವಿವರ

**ವಾರ್ಷಿಕ ಚಂದಾ 15-00 ರೂ**

**ಆಜೀವ ಸದಸ್ಯತ್ವ 151-00 ರೂ**

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ದಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಅನೇಕ ಮತಾಚಾರ, ಕುಲಾಚಾರ ಘಟಕಗಳ ವಿವಿಧ ಸಮಾಜಗಳನ್ನೊಳಗೊಂಡ ಹಿಂದೂ ಸಮಾಜದಲ್ಲಿ ಐಕಮತ್ಯ ಮೂಡಿ ಬಂದು ಎಲ್ಲ ಸಮಾಜಗಳ ಸರ್ವಾಂಗೀಣ ಪ್ರಗತಿಗೆ ಎಂದಿನಿಂದಲೂ ಬಾಧಕವಾಗುತ್ತಲೇ ಬಂದಿರುವುದನ್ನು ಸಾಹಿತ್ಯ ಕೃತಿಗಳು, ಇತಿಹಾಸ ಪುಟಗಳು ನಮಗೆ ತೋರಿಸಿಕೊಡುತ್ತಾ ಬಂದಿವೆ. ಹಿಂದೂ ಸಮಾಜಗಳ ವಿವಿಧ ಪಂಗಡಗಳ ಘಟಕಗಳೊಂದಿಗೆ ಹಿಂದೂ ಸಮಾಜದಿಂದಲೇ ಸಿಡಿದು ನಾವು ಹಿಂದುಗಳಲ್ಲವೆಂದು ಹೇಳಿಕೊಳ್ಳುವ ಬೌದ್ಧ, ಜೈನ, ಶಿಕ್ ಮೊದಲಾದ ಸಮಾಜಗಳು, ಮುಸ್ಲಿಂ, ಪಾರ್ಸಿ, ಕ್ರಿಶ್ಚಿಯನ್ ಇತರ ಆಗಂತುಕ ಸಮಾಜಗಳು, ಜೊತೆಗೆ ಇದುವರೆಗೆ ಅಲೆಮಾರಿಗಳಾಗಿ ಕಾಡು ಮೇಡು ಸುತ್ತಿ ಆಧುನಿಕ ಜಗತ್ತಿಲ್ಲಿ ನಾಗರೀಕರಾಗಿ ಬಾಳಬೇಕೆಂಬಾಸೆಯ ಗಿರಿಜನ ತಾಂಡಗಳ ಜನ ಬೇರೆ. ಈ ಎಲ್ಲ ಭಿನ್ನ ಭಿನ್ನ ಆಚಾರ ವ್ಯವಹಾರಗಳ ಜನಾಂಗಗಳನ್ನೆಲ್ಲ ಸೌಹಾರ್ದವಾಗಿ ಭಾವೈಕ್ಯಗೊಳಿಸಿ ಭಾರತೀತ್ವವನ್ನು ಬೆಳಸಿ ಸಮಗ್ರ ರಾಷ್ಟ್ರೀಯ ಅಭಿವೃದ್ಧಿಯತ್ತ ಎಲ್ಲರ ಕೈಗಳೂ ಒಂದುಗೂಡಿಸಿ ಕೆಲಸ ಮಾಡುತ್ತಾ ಸಂಘಟಿಸುವುದು ಅತ್ಯಂತ ಶ್ರಮಸಾಧ್ಯವಾದ ಕೆಲಸವಾಗಿ ರಾಷ್ಟ್ರ ೩೬ ವರ್ಷಗಳ ಪ್ರಭುತ್ವದಲ್ಲಿ ಸಾಧಿಸಬೇಕಾದ ಗುರಿಯನ್ನು ಸಾಧಿಸುವುದು ಅಸಾಧ್ಯವಾಗಿ ಹೋಗಿದೆ. ಈ ಅಡ್ಡಿ ಆತಂಕದ ಜೊತೆಗೆ ಪ್ರಾದೇಶಿಕ ಭಾಷಾಂಧತೆ, ವಿಚಾರಶೀಲರಲ್ಲದ ರಾಜಕೀಯ ಧುರೀಣರ ಸಾರಾಸಾರ ವಿಚಾರವಿಲ್ಲದ ಅಪಕ್ವ ರಾಜಕಾರಣ, ಹಣ ಮೊದಲಾದವುಗಳ ಪ್ರಲೋಭನಕ್ಕೊಳಗಾಗಿ ಶಾಸಕತ್ವವನ್ನೆ ಮಾರಾಟ ಮಾಡಿಕೊಳ್ಳುತ್ತಾ ವಿರೋಧ ಪಕ್ಷಗಳಿಂದ ಆಡಳಿತ ಪಕ್ಷಕ್ಕೆ, ಆಡಳಿತ ಪಕ್ಷದಿಂದ ವಿರೋಧ ಪಕ್ಷಕ್ಕೆ ತಿರುಗಾಡುವ ಶಾಸಕರು— ಈ ಎಲ್ಲ ಹುಬ್ಬಾಗಳ ಕಾರಣವಾಗಿ ಕೇವಲ ೩೬ ವರ್ಷಗಳ ಪ್ರಜಾಪ್ರಭುತ್ವ ಶಿಶುವಾದ ಭಾರತೀಯರ ರಾಜಕೀಯ ಜೀವನ ವಿಚಾರಶೀಲರೆಲ್ಲರನ್ನು ತಬ್ಬಿಬ್ಬುಗೊಳಿಸಿಬಿಟ್ಟಿದೆ. ರಾಷ್ಟ್ರೀಯ ಸಂಪತ್ತು ಅಂಕೆ ಮೀರಿ ಬುದ್ಧಿವಂತಿಕೆಯಿಂದ, ನಿಯಮೋಲ್ಲಂಘನಗಳಿಂದ ಕೆಲವೇ ಜನಗಳ ಕೈಸೇರಿ ಆದರ ಹಂಚಿಕೆ ಅಸ್ತವ್ಯಸ್ತಗೊಂಡಿದೆ. ಕಾರಣವಾಗಿ ಬಡವ-ಬಲ್ಲಿದ, ಉತ್ತಮ-ಕನಿಷ್ಠ, ಆಳು ಆಳುವವ, ದುಡ್ಡಿದ್ದವ-ಇಲ್ಲದವ ಮುಂತಾದ ಭೇದಗಳ ಸಮಾಜದಲ್ಲಿ ಉಂಟಾಗಿ ವರ್ಗಕಲಹ ಅಧಿಕಗೊಂಡು ಸಾಮಾಜಿಕ ನೆಮ್ಮದಿಗೆ ಭಂಗ ಬರುತ್ತದೆ. ಸಂಪನ್ಮೂಲಗಳು ಬತ್ತತೊಡಗಿವೆ. ಮಿತಿಮೀರಿದ ಕೈಗಾರೀಕರಣದಿಂದ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗಿ ಅವರೆಲ್ಲ ಏಕ್ರಮಾರ್ಗ ಅನುಸರಿಸಲು ಕಾರಣವಾಗಿದೆ. ವ್ಯವಸಾ

(3 ನೇ ರಕ್ಷಾ ಪುಟ ನೋಡಿ)

# ನವನೀತ

ಇಕ್ಷೋರಗ್ರಾತ್ ಕ್ರಮಶಃ ಯಥಾ ಪರ್ವಣಿ ರಸವಿಶೇಷಃ।
ತದ್ವತ್ ಸಜ್ಜನ ಮೈತ್ರೀ ವಿಪರೀತಾನಾಂ ತು ವಿಪರೀತಾ॥

ಕಬ್ಬಸ್ನು ತುದಿಯಿಂದ ಬುಡದ ಕಡೆಗೆ
ಸವಿಯೇ, ಸವಿ ಹೆಚ್ಚುವುದು ಗೆಣ್ಣಿಂದ ಗೆಣ್ಣಿಗೆ.
ಅಂತೆಯೇ ಸಜ್ಜನರ ಗೆಳೆತನವು ಕೂಡ,
ತಿರುವು ಮುರುವಾದಂತೆ ದುಷ್ಟರೊಡನಾಟ.

  

ನಾರಿಕೇಲ ಸಮಾಕಾರಾ ದೃಶ್ಯಂತೇ ಬಲುಸಜ್ಜನಾಃ।
ಅನ್ಯೇ ಬದರಿಕಾಕಾರಾಃ ಬಹಿರೇವ ಮನೋಹರಾಃ॥

ಒರಟಾದ ಹೊರಚಿಪ್ಪಿನೆಳನೀರಿನಂತೆ
ಹೊರನೋಟಕೊರಟೊರಟು ಒಳ್ಳೆಯವರು,
ಒಳಗೆಲ್ಲ ಹುಳು ತುಂಬಿದೆಲಚಿ ಹಣ್ಣಂತೆ
ಹೊರಗೆ ಬಲು ಚಂದವಿಹರಿತರೆ ಜನರು.

  

ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ।
ಲೋಕೋತ್ತರಾಣಾಂ ಚೇತಾಂಸಿ ಕೋನು ವಿಜ್ಞಾತುಮರ್ಹತಿ॥

ವಜ್ರಕಿಂತಲು ಗಡಸು ಸಜ್ಜನರ ಮನಸು
ಹೂವಿಗಿಂತಲೂ ಮೆದುವು, ಅದುವೆ ಸೊಗಸು
ದೇವರಂತಹ ಅವರ ಚಿತ್ತವನ್ನು
ಯಾವನರಿಯಲು ಸಾಧ್ಯ ಹೇಳು ನೀನು?

  

'ಕಾವ್ಯ ಸುಧಾಪ್ರಿಯ" (ಕೆ. ಜಿ. ರಂಗಯ್ಯ)

# ಮೃದು ಹೃದಯಿ ಡಾ॥ ವಿ. ಸೀ.

—ಚನ್ನಪ್ಪ ಎರೇಸೀಮೆ

ಒಂದು ವರ್ಷದ ಹಿಂದಿನ ಮಾತು. ವಿ. ಸೀ ಯವರು ಹಾಸಿಗೆ ಹಿಡಿದಿದ್ದರು. ಅರೆ ಪ್ರಜ್ಞೆ; ಸಾಮಾನ್ಯವಾಗಿ ಯಾರೊಡನೆಯೂ ಮಾತಿಲ್ಲ. ಮನೆಯ ಮಕ್ಕಳು ಉಪಚಾರಕ್ಕೆ ಬಂದರೆ ಕೈಸನ್ನೆ, ಕಣ್ಸನ್ನೆ, ಉಪಚಾರ ಮುಗಿದೊಡನೆ ಹಾಗೇ ಮಲಗಿಕೊಂಡೇ ಇರುವುದು. ಈ ಸ್ಥಿತಿಯಲ್ಲಿ 'ಸಿದ್ಧಗಂಗಾ ಶ್ರೀ' ಸಂಭಾವನಾ ಸಂಪುಟ ಕೊಡ ಹೋದಾಗ, ಮಲಗಿಕೊಂಡೇ ಕಣ್ಣು ಬಿಟ್ಟು ಪುಸ್ತಕ ನೋಡಿದರು. ಬೇರೆಯವರ ಆಸರೆಯಿಂದ ಕುಳಿತುಕೊಳ್ಳಬೇಕಾದ ಅವರು ಗ್ರಂಥ ನೋಡಿದೊಡನೆ ತಾವೇ ಹೊರಳಾಡಿ ಶಕ್ತಿ ಸಂಚಯನ ಮಾಡಿಕೊಂಡು ಕುಳಿತು ಆಶ್ಚರ್ಯ ಸೂಚಿಸುತ್ತ ಅಬ್ಬಾ! ಎಂಥ ಪುಸ್ತಕ ಹೊರತಂದಿರುವಿರಪ್ಪಾ! ಆಹಾ! ಹಾಹಾ!' ಎನ್ನುತ್ತ ಗ್ರಂಥವನ್ನು ಕೈಗೆ ತೆಗೆದುಕೊಂಡು ತಿರುವಿ ಹಾಕುತ್ತ ಶ್ಲಾಘನೆಗೆ ಪ್ರಾರಂಭ. ಎಂಟು ದಿನಗಳಿಂದ ಯಾರೊಡನೆಯೂ ಮಾತನಾಡದಿದ್ದ ತಂದೆ ಈಗ ಮಾತನಾಡುವುದನ್ನು ಕಂಡು ಮಕ್ಕಳೆಲ್ಲ ಅವಾಕ್ಕಾಗಿ ಸುತ್ತಮುತ್ತ ನೆರೆದು ನೋಡಿ ಹರ್ಷಿಸಿ ನಮಗೆ ಅಭಿನಂದನೆ ಸಲ್ಲಿಸಿದರು. ಈ ಪುಸ್ತಕದಿಂದಾದ ಪವಾಡ ಎಂದು ಹೇಳಿದರು. ನಮ್ಮನ್ನು ಕೊಂಡಾಡಿದರು.

ಕನ್ನಡ ನಾಡು ನುಡಿ, ಸಂಸ್ಕೃತಿ, ಇತಿಹಾಸ, ಶಿಕ್ಷಣ ಪ್ರಶ್ನೆ ಬಂದಾಗ ಶುದ್ಧಾಂತಃಕರಣದಿಂದ ಸಂತೋಷಾನುಭವ ಮಾಡುತ್ತಿದ್ದ 'ವೀ. ಸೀ.' ಎಂಬ ಪ್ರಖ್ಯಾತ ಕಾವ್ಯನಾಮದಿಂದ ಪ್ರಸಿದ್ಧರಾಗಿದ್ದ ವಿ. ಸೀತಾರಾಮಯ್ಯನವರು ಕನ್ನಡನಾಡಿನ ಪ್ರಸಿದ್ಧ ಸಾಹಿತಿಗಳು; ಉತ್ತಮ ಮಟ್ಟದ ಉಪಾಧ್ಯಾಯರು, ವಿಮರ್ಶಕ, ನಾಟಕಕಾರ, ಕವಿ, ಪ್ರಬಂಧಕಾರ, ಅರ್ಥಶಾಸ್ತ್ರಜ್ಞ, ಸಮಾಜಶಾಸ್ತ್ರಜ್ಞ, ಧರ್ಮಭೀರು, ಕಲೆ, ಸಂಗೀತಾಭಿರುಚಿಗಳ ಸಹೃದಯಿ ಪತ್ರಕರ್ತ— ಇತ್ಯಾದಿ ಅನೇಕಮುಖ ಪಾಂಡಿತ್ಯಶ್ರೀ ಸಮನ್ವಿತ ಆಚಾರಪುರುಷರೆನಿಸಿದ್ದರು.

ಕ್ರಿ. ಶ. ೧೮೯೯ ನೇ ಅಕ್ಟೋಬರ್ ಎರಡರಂದು ಬೆಂಗಳೂರು ಜಿಲ್ಲಾ ಬೂದಿಗೆರೆ ಗ್ರಾಮದ ಹುಲ್ಲೂರು ವೆಂಕಟರಾಮಯ್ಯ ದೊಡ್ಡವೆಂಕಟಮ್ಮ ದಂಪತಿಗಳ ಸತ್ಪುತ್ರನೆನಿಸಿ ಜನ್ಮತಳೆದ ವಿ. ಸೀಯವರ ವಿದ್ಯಾಭ್ಯಾಸ ಬೆಂಗಳೂರು--ಮೈಸೂರು ಬೊಂಬಾಯಿಗಳಲ್ಲಿ ಆಯಿತು. ಮೈಸೂರು ಮಹಾರಾಜ ಕಾಲೇಜಿನಲ್ಲಿ ೧೯೧೭ ರಿಂದ ೧೯೨೨ ರವರೆಗೆ ನಡೆದು ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ದರ್ಶನ ಶಾಸ್ತ್ರಗಳಲ್ಲಿ

ಎಂ. ಎ. ಪದವಿಯನ್ನೂ [೧೯೨೨] ಪಡೆದು, ಕಾನೂನು ಕಲಿಯಲು ಬೊಂಬಾಯಿಗೆ ತೆರಳಿ ಅಲ್ಲಿ ಪ್ರಥಮತಃ 'ಡೆಪ್ಯುಟಿ ಕಂಟ್ರೋಲರ್ ಆಫ್ ಕರೆನ್ಸಿ ಆಫೀಸ್' ನಲ್ಲಿ ಕೆಲಸಕ್ಕೆ ಸೇರಿದರು. ೧೯೨೫ ರಲ್ಲಿ ಶ್ರೀಮತಿ ಸರೋಜಮ್ಮ ಅವರೊಡನೆ ವಿವಾಹಿತರಾದ ಈ ಗೃಹಸ್ಥರಿಗೆ ನಾಲ್ಕು ಗಂಡು, ಮೂರು ಹೆಣ್ಣು ಮಕ್ಕಳು. ಬೋಧನಾ ಸಾಮರ್ಥ್ಯವನ್ನು ಹುಟ್ಟುಗುಣವಾಗಿ ಪಡೆದಿದ್ದ ಈ ಚತುರ ಬೋಧಕರು ಬೊಂಬಾಯಿನ ತಮ್ಮ ಕೆಲಸಕ್ಕೆ ಕೈಮುಗಿದು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ೧೯೨೮ ರಲ್ಲಿ ನೇಮಕಗೊಂಡು ನಿವೃತ್ತರಾಗುವವರೆಗೆ ಮಾಡಿದ ಇವರ ಶ್ಲಾಘ್ಯ ಉಪಾಧ್ಯಾಯ ವೃತ್ತಿಯನ್ನು ಕೊಂಡಾಡದವರಿಲ್ಲ. ಇವರು ಆದರ್ಶ ಉಪಾಧ್ಯಾಯರಾಗಿ ಶಿಷ್ಯರಿಗೆ ಸ್ಫೂರ್ತಿಯ ಸೆಲೆಯಾಗಿದ್ದರು. ಬಾಳಿನುದ್ದಕ್ಕೂ ಉಪಾಧ್ಯಾಯರಾಗಿದ್ದರೂ ಜ್ಞಾನ ಪಿಪಾಸುವಾಗಿ ವಿದ್ಯಾರ್ಥಿಯೂ ಆಗಿರುತ್ತಿದ್ದರು. 'ಕಾವ್ಯಮೀಮಾಂಸೆ, ಛಂದಸ್ಸು, ಸಾಹಿತ್ಯ, ವಿಮರ್ಶೆ, ವ್ಯಾಕರಣ ಮೊದಲಾದ ಶಾಸ್ತ್ರಗಳನ್ನು ಕೂಲಂಕಷವಾಗಿ ಕೊನೆಯುವರೆಗೂ ತಮ್ಮ ಅಭ್ಯಾಸ ವಿಷಯಗಳನ್ನಾಗಿ ಮಾಡಿಕೊಂಡಿದ್ದರು. ಸಂಸ್ಕೃತದ ಕಾವ್ಯ ನಾಟಕ ಉಪನಿಷತ್ತು, ರಾಮಾಯಣ, ಭಾರತಗಳ ಅಭ್ಯಾಸ ಇವರ ದಿನನಿತ್ಯದ ಉಸಿರಾಗಿತ್ತು.

ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳೆರಡರಲ್ಲೂ ಅಗಾಧ ಪಾಂಡಿತ್ಯ ಅನ್ಯಾದೃಶ ಬಹುಶ್ರುತತ್ವಗಳಿಸಿದ್ದ ಇವರು ಕೇವಲ ಶುಷ್ಕ ಪಂಡಿತರಾಗಿರಲಿಲ್ಲ; ರಸಿಕ ಪಾಂಡಿತ್ಯ ಪಡೆದವರು. ರಸಗ್ರಾಹಿಗಳು, ಗೀತಗಳು, ದೀಪಗಳು, ನೆಳಲು ಬೆಳಕು ದ್ರಾಕ್ಷಿದಾಳಿಂಬೆ, ಹೆಜ್ಜೆಪಾಡು, ಕದಂಬ, ಅದಲು-ಬದಲು, ಹಗಲು-ಇರುಳು, ಶಬರಿ ಮೊದಲಾದ ಕವನ ಸಂಕಲಗಳಲ್ಲಿ ಇವರ ಕವಿ ಹೃದಯ, ರಸಿಕತೆ, ರಮಣೀಯಾರ್ಥಗಳನ್ನು ಕಾಣಬಹುದು. ಇವರು ಸುಮಾರು ೨೬ ಕನ್ನಡ ಗದ್ಯ ಕೃತಿಗಳನ್ನು, ೬ ಇಂಗ್ಲೀಷ್ ಕೃತಿಗಳನ್ನೂ ೫ ಅನುವಾದ ಕೃತಿಗಳನ್ನೂ ರಚಿಸಿದ್ದಲ್ಲದೆ ಅನೇಕ ಲೇಖನಗಳನ್ನೂ ಬರೆದು ಕನ್ನಡ ಸಾಹಿತ್ಯ ಸಂಪತ್ತನ್ನು ಹುಲುಸಾಗಿಸಿದ್ದಾರೆ.

ಉಪಾಧ್ಯಾಯ ವೃತ್ತಿಯಿಂದ ನಿವೃತ್ತರಾದ ಮೇಲೆ ಶ್ರೀಯುತರು ಬೆಂಗಳೂರು ಆಕಾಶವಾಣಿಯಲ್ಲಿ ಕಾರ್ಯಕ್ರಮ ಯೋಜಕರಾಗಿ, ಭಾರತೀಯ ಜ್ಞಾನ ಪೀಠಪ್ರಶಸ್ತಿ ಸಲಹಾಮಂಡಲಿ ಸದಸ್ಯರಾಗಿ, ಐ.ಬಿ.ಹೆಚ್‌ಪ್ರಕಾಶನ ಸಂಸ್ಥೆಯ ಕವಿಕಾವ್ಯ ಪರಂಪರೆಯ ಸಂಪಾದಕರಾಗಿ ಮಾಡಿದ ಸೇವೆ ಗಣನೀಯ. ಕನ್ನಡ ಸಾಹಿತ್ಯ ಪರಿಷತ್ತಿನ ನಿಕಟಸಂಪರ್ಕವನ್ನು ಕೊನೆಯವರೆಗೂ ಇಟ್ಟುಗೊಂಡಿದ್ದ ವೀ.ಸೀಯವರು

(3 ನೇ ರಕ್ಷಾ ಪುಟ ನೋಡಿ)

# ಜಗದ್ದರ್ಶನ ಮಾಲೆ--೫

## ಶಕ್ತಿವಿಶಿಷ್ಟಾದ್ವೈತ

—ವಿದ್ವಾನ್ ವೈ. ವಿಶ್ವನಾಥಶಾಸ್ತ್ರೀ

(ಶ್ರೀಕರಭಾಷ್ಯ ಶ್ರೀಕಠ ಭಾಷ್ಯಗಳಲ್ಲಿ ಪ್ರತಿಪಾದಿತವಾಗಿರುವಂತೆ.)

ಧರ್ಮಾರ್ಥಕಾಮಮೋಕ್ಷಗಳೆಂದು ಪ್ರಸಿದ್ಧವಾದ ನಾಲ್ಕುವಿಧ ಪುರುಷಾರ್ಥಗಳಲ್ಲಿ, ದುಃಖಸಂಪರ್ಕವಿಲ್ಲದ ನಿರಂತರ ನಿರತಿಶಯ ದಿವ್ಯಸುಖಾನುಭವರೂಪವೂ, ನಿತ್ಯವೂ ಆಗಿರುವುದರಿಂದ ಮೋಕ್ಷವೇ ಮುಖ್ಯವಾದ ಪುರುಷಾರ್ಥವೆಂದು ಪರಿಗಣಿಸಲ್ಪಟ್ಟಿದೆ. "**ತಮೇವವಿದಿತ್ವಾತಿಮೃತ್ಯುಮೇತಿ। ನಾನ್ಯಃಪಂಥಾ ವಿದ್ಯತೇsಯನಾಯ**" ಇವೇ ಮುಂತಾದ ಅನೇಕ ಪ್ರಮಾಣಗಳಿಂದ ಈ ಮೋಕ್ಷಕ್ಕೆ ಪರಬ್ರಹ್ಮಜ್ಞಾನವೇ ಕಾರಣವೆಂದು ತಿಳಿದುಬರುತ್ತದೆ. ಈ ಪರಬ್ರಹ್ಮಸ್ವರೂಪವನ್ನು ಉಪನಿಷತ್ತುಗಳೆಂಬ ವೇದಭಾಗಗಳು ಪ್ರತಿಪಾದನೆ ಮಾಡುತ್ತವೆ. ಈ ಉಪನಿಷತ್ತುಗಳ ಸಿದ್ಧಾಂತರೂಪವಾದ ಅರ್ಥವು ಅತಿಗಹನವಾಗಿರುವುದರಿಂದ ನ್ಯಾಯಬದ್ಧವಾಗಿ ಇವುಗಳ ತಾತ್ಪರ್ಯಾರ್ಥವನ್ನು ನಿರ್ಣಯ ಮಾಡುವುದಕ್ಕಾಗಿ ಸರ್ವಜ್ಞರೂ ಪರಮಕಾರಣಿಕರೂ ಆದ ಪೂಜ್ಯ ಭಗವದ್ಬಾದರಾಯಣಾಚಾರ್ಯರೆಂಬ ಶ್ರೀಮತ್ ವ್ಯಾಸಮುನಿಗಳು '**ಅಥಾತೋಬ್ರಹ್ಮಜಿಜ್ಞಾಸಾ**' ಎಂಬ ಸೂತ್ರವೇ ಮೊದಲಿರುವ ನಾಲ್ಕು ಅಧ್ಯಾಯಗಳುಳ್ಳ ವೇದಾಂತಶಾಸ್ತ್ರವನ್ನು ಸೂತ್ರರೂಪವಾಗಿ ರಚಿಸಿ ಮೋಕ್ಷಾರ್ಥಿಗಳಿಗೆ ತತ್ತ್ವಜ್ಞಾನಾನುಗ್ರಹದಿಂದ ಮಹೋಪಕಾರವನ್ನು ಮಾಡಿರುತ್ತಾರೆ.

ಅತಿಗಂಭೀರವಾದ ಈ ವೇದಾಂತ ಸೂತ್ರಗಳಿಗೆ ಅನೇಕ ಆಚಾರ್ಯರು ಭಾಷ್ಯಗಳನ್ನು ಬರೆದಿರುತ್ತಾರೆ. ಶಿವಭಕ್ತಾಗ್ರೇಸರರಾದ ಶ್ರೀ ಶ್ರೀಕಂಠಾಚಾರ್ಯರೂ ಮತ್ತು ಶ್ರೀಶ್ರೀಪತಿಪಂಡಿತಾಚಾರ್ಯರೂ ಸಹ ಈ ವ್ಯಾಸಸೂತ್ರಗಳಿಗೆ ಸಗುಣಶಿವ ಪರವಾಗಿ ಭಾಷ್ಯವನ್ನು ರಚಿಸಿರುವರು. ಶ್ರೀಶ್ರೀಪತಿಪಂಡಿತಾಚಾರ್ಯರು ತಮ್ಮ ಭಾಷ್ಯಕ್ಕೆ 'ಶ್ರೀಕರ" ಭಾಷ್ಯವೆಂದು ಹೆಸರಿಸಿರುವರು. ಈ ಎರಡು ಭಾಷ್ಯಗಳಲ್ಲಿಯೂ ಶಕ್ತಿವಿಶಿಷ್ಟಾದ್ವೈತಸಿದ್ಧಾಂತದ ಅನೇಕ ಅಂಶಗಳು ಪ್ರತಿಪಾದಿತವಾಗಿರುತ್ತವೆ.

**ಶೈವಾಗಮ ಪ್ರಾಮಾಣ್ಯವಿಚಾರ:** ಈ ಎರಡು ಭಾಷ್ಯಗಳಲ್ಲಿಯೂ ಶೈವಾಗಮಗಳಿಗೆ ವೇದ ಸಮವಾದ ಪ್ರಾಮಾಣ್ಯವನ್ನು ಪ್ರತಿಪಾದನೆ ಮಾಡಿರುತ್ತಾರೆ. ಕಾಮಿಕ ಮೊದಲು ವಾತುಲ ಕೊನೆಯಾಗಿರುವ ಇಪ್ಪತ್ತೆಂಟು ಆಗಮಗಳಿಗೆ ಶೈವಾ

ಗಮವೆಂದು ಹೆಸರು. **'ಅಸ್ಯಮಹತೋಭೂತಸ್ಯ ನಿಶ್ವಸಿತಮೇತತ್ ಯದೃ ಗ್ವೇದೋ ಯಜುರ್ವೇದಃ ಸಾಮವೇದಃ'** ಎಂಬ ಶ್ರುತಿವಚನದಿಂದ ವೇದರಾ ಶಿಯು ಪರಶಿವನಿಂದ ನಿಟ್ಟುಸಿರಿನಂತೆ ಪ್ರಯತ್ನವಿಲ್ಲದೆ ಉತ್ಪನ್ನವಾಯಿತೆಂದು ತಿಳಿ ಯುವುದರಿಂದ ಈಶ್ವರನಿಂದ ನಿರ್ಮಿತವಾದದ್ದೆಂದು ಸಿದ್ಧವಾಗಿದೆ.

'ಅಷ್ಟಾದಶಪುರಾಣಾನಾಂ ಕರ್ತಾಸತ್ಯವತೀಸುತಃ ।
ಕಾಮಿಕಾದಿಪ್ರಭೇದಾನಾಂ ಯಥಾ ದೇವೋಮಹೇಶ್ವರಃ '

ಎಂಬ ಸೂತಸಂಹಿತಾ ವಚನದಿಂದ ಶೈವಾಗಮಗಳು ಶಿವನಿರ್ಮಿತವೆಂದು ಸಿದ್ಧವಾ ಗುತ್ತದೆ.

ಹೀಗೆ ವೇದಗಳಿಗೂ ಶೈವಾಗಮಗಳಿಗೂ ಶಿವನೊಬ್ಬನೇ ಕರ್ತೃವಾಗಿರುವುದ ರಿಂದಲೂ, ಪಂಚಬ್ರಹ್ಮ-ಪ್ರಣವ-ಪಂಚಾಕ್ಷರೀ ಮೊದಲಾದ ಮಂತ್ರಗಳೂ, ಲಿಂಗಾ ರ್ಚನ-ಭಸ್ಮಧಾರಣಾದಿ ಧರ್ಮಗಳೂ ವೇದದಲ್ಲಿಯೂ ಶೈವಾಗಮಗಳಲ್ಲಿಯೂ ಪ್ರತಿ ಪಾದಿತವಾಗಿರುವುದರಿಂದ ವೇದಗಳೂ ಶೈವಾಗಮಗಳೂ ಸಮಪ್ರಮಾಣವಾಗಿವೆ ಎಂದು ಶ್ರೀಶ್ರೀಕಂಠಾಚಾರ್ಯರು ಪ್ರತಿಪಾದಿಸಿದ್ದಾರೆ. ಶ್ರೀಶ್ರೀಪತಿಪಂಡಿತರೂ ಸಹ ತಮ್ಮ ಭಾಷ್ಯದಲ್ಲಿ ಈ ವಿಷಯವನ್ನು ಹೇಳಿರುವುದಲ್ಲದೆ ಇನ್ನೂ ಕೆಲವು ವಿಶೇಷಾಂ ಶಗಳನ್ನೂ ಪ್ರತಿಪಾದಿಸಿರುತ್ತಾರೆ. ಅದೇನೆಂದರೆ: **'ಸದ್ಯೋಜಾತೇನ ಋಗ್ವೇದಂ ವಾಮದೇವೇನ ಯಜುಷಂ'** ಎಂದು ಸ್ಮೃತಿಯಲ್ಲಿ ಪರಮೇಶ್ವರನ ಒಂದೊಂದು ಮುಖದಿಂದ ಒಂದೊಂದು ವೇದಗಳ ನಿರ್ಮಾಣವನ್ನು ಹೇಳಿ

'ಈಶಾನೇನ ಮುಖೇನೈವ ಕಾಮಿಕಾದ್ಯಾಗಮಾಂಸ್ತಥಾ ।
ಜನಯಾಮಾಸ ವಿಶ್ವೇಶಃ ಸರ್ವಸಿದ್ಧಿಪ್ರದಾಯಕಃ ॥'

ಎಂದು ಕಾಮಿಕ ಮೊದಲಾದ ಆಗಮಗಳು ಸಾಕ್ಷಾತ್ ಪರಮೇಶ್ವರನ ಈಶಾನ್ಯ ಮುಖದಿಂದ ನಿರ್ಮಿತವಾದವು ಎಂದು ಪ್ರತಿಪಾದಿಸಿರುತ್ತಾರೆ. ಮತ್ತು ಶೈವಾಗಮ ಗಳಲ್ಲಿ ಪ್ರಧಾನವಾಗಿ ಪ್ರತಿಪಾದಿತವಾಗಿರುವ **'ಪತಿ-ಪಶು-ಪಾಶ'**ಗಳೆಂಬ ಮೂರು ಪದಾರ್ಥಗಳೂ ವೇದದಲ್ಲಿ :

'ಏತಾವಂತೋ ವೈಪಶವಃ ದ್ವಿಪಾದಶ್ಚತುಷ್ಪಾದಃ,
ಏಷಾಮೀಶೇಪತಿಃಪಶೂನಾಂ, ಧ್ಯಾನ ನಿರ್ಮಥನಾಭ್ಯಾಸಾತ್ಪಾಶಂ
ದಹತಿ ಪಂಡಿತಃ॥'

ಇವೇ ಮುಂತಾದ ವಚನಗಳಿಂದ ಪ್ರತಿಪಾದಿತವಾಗಿರುವುದರಿಂದ ಶೈವಾಗಮಗಳು ವೇದ ಸಮಪ್ರಮಾಣಗಳೆಂದು ಸಮರ್ಥನೆ ಮಾಡಿರುತ್ತಾರೆ.

## ಶಿವನೇ ವೇದಾಂತ ಸೂತ್ರ ಪ್ರತಿಪಾದ್ಯವಾದ ಪರಬ್ರಹ್ಮ ವಸ್ತುವು

**ಅಥಾತೋಃ ಬ್ರಹ್ಮಜಿಜ್ಞಾಸಾ** ' ಎಂಬ ಮೊದಲಿನ ವ್ಯಾಸಸೂತ್ರದಲ್ಲಿರುವ ಬ್ರಹ್ಮಪದಕ್ಕೆ ಶಿವನೇ ಅರ್ಥವೆಂದು ಶ್ರೀ ಶ್ರೀಕಂಠಾಚಾರ್ಯರು ಹೀಗೆ ಸಮರ್ಥನೆ ಮಾಡಿರುತ್ತಾರೆ:

> 'ಯತೋವಾ ಇಮಾನಿಭೂತಾನಿ ಜಾಯಂತೇ ಯೇನ ಜಾತಾನಿಜೀವಂತಿ
> ಯತ್ಪ್ರಯತ್ಯಭಿಸಂವಿಶಂತಿ । ತದ್ಬ್ರಹ್ಮ ॥'

ಇವೇ ಮುಂತಾದ ಉಪನಿಷದ್ವಾಕ್ಯಗಳು ಸಕಲವಸ್ತುಗಳ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣವಾದ ವಸ್ತುವೇ ಬ್ರಹ್ಮವೆಂದು ಬ್ರಹ್ಮ ಲಕ್ಷಣವನ್ನು ಬೋಧಿಸುತ್ತವೆ. ಸಕಲ ಪ್ರಪಂಚಕ್ಕೂ ಕಾರಣವಾದ ಸೃಷ್ಟಿಪೂರ್ವದಲ್ಲಿರುವ ಈ ಬ್ರಹ್ಮವಸ್ತುವು ಯಾವು ದೆಂದು ವಿಚಾರಮಾಡಿದರೆ **'ಯದಾತಮಸ್ತನ್ನದಿವಾ ನರಾತ್ರಿರ್ನಸನ್ನಚಾಸನ್ ಶಿವ ಏವ ಕೇವಲಃ"** ಶ್ವೇತಾಶ್ವತರೋಪನಿಷತ್ತಿನ ಮಂತ್ರವು, ಯಾವ ಕಾಲ ದಲ್ಲಿ ಸೂರ್ಯಚಂದ್ರಾದಿಗಳ ಪ್ರಕಾಶವಿಲ್ಲದ ಕಾರಣ ಹಗಲು ರಾತ್ರಿಗಳೆಂಬ ವಿಭಾ ಗವಿಲ್ಲದೆ ಅಂಧಕಾರ ಮಾತ್ರವೇ ಇರುವುದೊ ಅಂತಹ ಪ್ರಳಯಕಾಲದಲ್ಲಿ **ಶಿವನೊ** ಬ್ಬನೇ ಸಾಕ್ಷಿಯಾಗಿರುತ್ತಾನೆ. ಎಂದು ಬೋಧಿಸುವುದರಿಂದ ಶಿವನೇ ಜಗತ್ಕಾರಣ ವಾದ ಬ್ರಹ್ಮವಸ್ತುವೆಂದು ಸಿದ್ಧವಾಗುತ್ತದೆ. ಶ್ರೀಶ್ರೀಪತಿಪಂಡಿತಾಚಾರ್ಯರೂ ಸಹ

> 'ಮಯ್ಯೇವ ಸಕಲಂ ಜಾತಂ ಮಯಿಸರ್ವಂ ಪ್ರತಿಷ್ಠಿತಂ ।
> ಮಯಿಸರ್ವಂ ಲಯಂಯಾತಿ ತದ್ಬ್ರಹ್ಮಾದ್ವಯಮಸ್ಮ್ಯಹಂ ॥'

ಇವೇ ಮುಂತಾದ ಅನೇಕ ಪ್ರಮಾಣಗಳಿಂದ ಶಿವನೇ ಪ್ರಪಂಚದ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನೆಂದು ತಿಳಿಯುವುದರಿಂದ ಶಿವನೇ ಪರಬ್ರಹ್ಮನೆಂದು ಸಮ ರ್ಥನೆ ಮಾಡಿರುತ್ತಾರೆ.

**ಸಗುಣಬ್ರಹ್ಮ:** ಈ ಇಬ್ಬರು ಆಚಾರ್ಯರ ಸಿದ್ಧಾಂತದಲ್ಲಿಯೂ ಪರ ಬ್ರಹ್ಮರೂಪನಾದ ಪರಶಿವನು ನಿರ್ಗುಣ ಸ್ವರೂಪನಲ್ಲ. ಸಗುಣ ಸ್ವರೂಪನೇ ಆಗಿ ರುತ್ತಾನೆ, ಯಾಕೆಂದರೆ: **'ಪರಾಸ್ಯಶಕ್ತಿರ್ವಿವಿಧೈವಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ"** ಎಂಬ ಉಪನಿಷದ್ವಾಕ್ಯವು ಶಿವನಿಗೆ ಜ್ಞಾನ-ಶಕ್ತಿ ಕ್ರಿಯಾ ಶಕ್ತಿ ಮುಂತಾದ ಅನೇಕ ವಿಧವಾದ ಶಕ್ತಿ ಸಂಪತ್ತನ್ನು ತಿಳಿಸಿ ಶಕ್ತಿಯು **'ಸ್ವಾಭಾ ವಿಕೀ'** ಎಂದೂ ಹೇಳಿರುವುದರಿಂದ ಶಿವನು ಸರ್ವಕಾಲದಲ್ಲಿಯೂ ಶಕ್ತಿಸಂಪನ್ನನೇ ಹೊರತು ಯಾವಾಗಲೂ ನಿರ್ಗುಣನಲ್ಲವೆಂದು ತಿಳಿಯುತ್ತದೆ.

ಮತ್ತು **'ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ'** ಇವೇ ಮುಂತಾದ ಉಪನಿಷದ್ವಾಕ್ಯಗಳಿಂದ ಉಮಾ ಸಹಿತವಾದ ಮತ್ತು ನೀಲವರ್ಣದ ಕಂಠವುಳ್ಳ, ಮೂರು ಕಣ್ಣುಗಳುಳ್ಳ ಪ್ರಶಾಂತ ವಾದ ದಿವ್ಯಮಂಗಳ ವಿಗ್ರಹವಿಶಿಷ್ಟನೆಂದು ತಿಳಿಯುವುದರಿಂದ ಶಿವನು ಸಗುಣನೇ ಆಗಿರುತ್ತಾನೆ.

**ಪರಶಕ್ತಿಯ ಮಹಿಮೆ:** ಶ್ರೀಶ್ರೀಕಂಠಾಚಾರ್ಯರು ತಮ್ಮ ಭಾಷ್ಯದ ಅನೇಕಪ್ರಕರಣಗಳಲ್ಲಿ ಪರಶಕ್ತಿಯ ಮಹಿಮೆಯನ್ನು ಪ್ರತಿಪಾದಿಸಿರುತ್ತಾರೆ. **'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಅಧಿಕರಣದಲ್ಲಿ** (೧-೨-೧)ಶಕ್ತಿಯ ವಿಚಾರವಾಗಿ ಹೀಗೆ ನಿರೂಪಣೆ ಮಾಡಿರುತ್ತಾರೆ. ಶ್ರುತಿ-ಸ್ಮೃತಿ-ಇತಿಹಾಸ-ಪುರಾಣ ಮೊದಲಾದ ಪ್ರಮಾಣಗಳ ಆಧಾರದಿಂದ ಚೇತನಾತ್ಮಕವಾದ ಪ್ರಪಂಚ ವೆಲ್ಲವೂ ಪರಶಕ್ತಿಯ ಪರಿಣಾಮವಾಗಿರುತ್ತದೆ. ಈ ಪರಶಕ್ತಿಯು ಪರಮೇಶ್ವರನಲ್ಲಿ ರುವ ಮಹಾಜ್ಞಾನ-ಮಹಾನಂದ-ಮಹಾಸತ್ತಾರೂಪವಾಗಿದ್ದು ಪರಶಿವನಿಗೆ ಸ್ವರೂ ಪವೂ ಗುಣವೂ ಆಗಿರುತ್ತದೆ. ಈ ಪರಶಕ್ತಿಯ ವಿಷಯದಲ್ಲಿ ಹೆಚ್ಚು ಮಾತುಗ ಳನ್ನು ಹೇಳಿ ಪ್ರಯೋಜನವೇನು ? ಈ ಪರಶಕ್ತಿಇಲ್ಲದೆ ಪರಶಿವನು ಸರ್ವಜ್ಞನೂ ಸರ್ವಕಾರಣನೂ ಎಲ್ಲರಿಗೂ ಅನುಗ್ರಹ ಮಾಡುವವನೂ ಎಲ್ಲರಿಂದಲೂ ಪೂಜಿಸಲ್ಪ ಡುವವನೂ ಎಲ್ಲರಿಂದಲೂ ಪೂಜಿಸಲ್ಪಡುವವನೂ ಎಲ್ಲ ಪ್ರದೇಶಗಳಲ್ಲಿ ವ್ಯಾಪಿಸಿ ಕೊಂಡಿರುವವನೂ ಆಗಲಾರನು ಮತ್ತು ಮಹೇಶ್ವರ-ಮಹಾದೇವ ಇವೇ ಮೊದ ಲಾದ ಶ್ರೇಷ್ಠ ಪದಗಳಿಂದ ಹೇಳಲು ಯೋಗ್ಯನಾದವನೂ ಸಹ ಆಗಲಾರನು.

'ಶಕ್ತಯೋಽಸ್ಯ ಜಗತ್ಸರ್ವಂ ಶಕ್ತಿಮಾಂಸ್ತು ಮಹೇಶ್ವರಃ ।
ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಕಯೋರಿವ' ॥

ತಾತ್ಪರ್ಯ–ಈ ಪ್ರಪಂಚವೆಲ್ಲವೂ ಪರಮೇಶ್ವರನ ಶಕ್ತಿಯ ಪರಿಣಾಮವೇ ಆಗಿದೆ. ಬೆಂಕಿ ಯಿಂದ ದಾಹಶಕ್ತಿನ್ನು ಬೇರ್ಪಡಿಸಲು ಹೇಗೆ ಸಾಧ್ಯವಿಲ್ಲವೊ ಹಾಗೆ ಈ ಪರಶಕ್ತಿಯು ಪರಮೇ ಶ್ವರನಿಂದ ಬೇರ್ಪಡಿಸಲು ಸಾಧ್ಯವಿಲ್ಲದಂತೆ ಅವನಲ್ಲಿ ಅಭಿನ್ನವಾಗಿರುವುದು. **'ಏಕಾ ನೇಕ ಸ್ವರೂಪೇಣ ಭಾತಿಭಾನೋರಿವ ಪ್ರಭಾ'** ಸೂರ್ಯ ಬಿಂಬದಲ್ಲಿ ಪ್ರಭೆ ಯಂತೆ ಈ ಪರಶಕ್ತಿಯು ಪರಶಿವನಲ್ಲಿ ಒಂದೇ ರೂಪದಿಂದಲೂ, ಮತ್ತು ಪ್ರಪಂಚ ವನ್ನು ನಿರ್ಮಾಣ ಮಾಡುವುದು ಪಾಲನೆಮಾಡುವುದು ಮೊದಲಾದ ನಾನಾ ರೂಪವಾಗಿಯೂ ಇರುತ್ತದೆ. **'ಯ ಇಮಾನ್ ಲೋಕಾನೀಶತೇ ಈಶಿನೀಭಿಃ'** ಪರಮಶಿವನು ನಾನಾರೂಪವಾದ ಈ ಶಕ್ತಿಯ ಬಲದಿಂದಲೇ ಪ್ರಪಂಚಕ್ಕೆ ಅಧಿಪತಿ ಯಾಗಿರುತ್ತಾನೆ. ಹೀಗೆ ಅನೇಕ ವಿಧವಾಗಿ ಪರಶಕ್ತಿಯ ಮಹಿಮೆಯನೂ ನಿರೂ ಪಣೆ ಮಾಡಿರುತ್ತಾರೆ.

ಶ್ರೀಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಈ ಪರಶಕ್ತಿಯು ಆಯಾಯ ಕಾರ್ಯಗಳ ನಿರ್ವಹಣೆಗಾಗಿ ಅ ನೇ ಕ ಚೇತನ ರೂಪವನ್ನು ಹೊಂದುವುದೆಂದೂ ಪ್ರಮಾಣ ವಚನದಿಂದ ಹೀಗೆ ನಿರೂಪಣೆ ಮಾಡಿರುತ್ತಾರೆ.

'ಭೋಗೇಭವಾನೀ ಪುರುಷೇಚವಿಷ್ಣುಃ ಕ್ರೋಧೇಚಕಾಲೀಸಮರೇಚದುರ್ಗಾ ।
ಏಕೈವಶಕ್ತಿಃ ಪರಮೇಶ್ವರಸ್ಯ ಭಿನ್ನಾಚತುರ್ಧಾವಿನಿಯೋಗಕಾಲೇ'

ತಾತ್ಪರ್ಯ–ಒಂದೇ ಶಕ್ತಿಯು ಪರಮೇಶ್ವರನಿಗೆ ಭೋಗಕಾಲದಲ್ಲಿ ಭವಾನೀ ರೂಪವಾಗಿಯೂ, ಪುರುಷರ ಕಾ ರ್ಯ ಕ್ಕೆ ಅನುಕೂಲವಾಗಿ ವಿಷ್ಣುರೂಪವಾಗಿಯೂ, ಯುದ್ಧಕಾಲದಲ್ಲಿ ದುರ್ಗಾರೂಪವಾಗಿಯೂ ಆಯಾಯಕಾರ್ಯಗಳನ್ನು ನಿರ್ವಾಹ ಮಾಡುತ್ತದೆ.

**ಲಿಂಗಧಾರಣ ವಿಚಾರ :–** ಶ್ರೀಕಂಠಭಾಷ್ಯದಲ್ಲಿ ಲಿಂಗಧಾರಣ ವಿಚಾರವು ಎಲ್ಲಿಯೂ ಕಂಡುಬರುವುದಿಲ್ಲ. ಶ್ರೇಷ್ಠವಾದ ಕೆಲವು ಧರ್ಮಗಳು ವೇದದಲ್ಲಿಯೂ ಮತ್ತು ಆಗಮದಲ್ಲಿಯೂ ಸಮವಾಗಿ ಹೇಳಲ್ಪಟ್ಟಿವೆ ಎಂದು ಪ್ರತಿಪಾದಿಸುವ ಸಂದರ್ಭದಲ್ಲಿ ''ಪತ್ಯುರಸಾಮಂಜಸ್ಯಾತ್'' (೨–೨–೮) ಎಂಬ ಅಧಿಕರಣದಲ್ಲಿ 'ಭಸ್ಮೋದ್ಧೂಳನ–ತ್ರಿಪುಂಡ್ರಧಾರಣ-ಲಿಂಗಾರ್ಚನ-ರುದ್ರಾಕ್ಷಧಾರಣಾದಿ ಪರಧರ್ಮಾಣಾಂ'' ಎಂಬ ಭಾಗದಲ್ಲಿ ಲಿಂಗಾರ್ಚನವೆಂಬ ಪದವಿದೆ. ಸ್ಪಷ್ಟವಾಗಿ ಲಿಂಗಧಾರಣ ಪದವಿರುವುದಿಲ್ಲ. ಶ್ರೀಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಅನೇಕ ಸ್ಥಳಗಳಲ್ಲಿ ಲಿಂಗಧಾರಣೆಯನ್ನು ಪ್ರತಿಪಾದನೆಮಾಡಿರುತ್ತಾರೆ. 'ಅಥಾತೋಬ್ರಹ್ಮಜಿಜ್ಞಾಸಾ' ಎಂಬ ಮೊದಲ ಸೂತ್ರದಲ್ಲಿರುವ 'ಅಥ'' ಪದಕ್ಕೆ ಪರಶಿವನ ಇಷ್ಟಲಿಂಗಧಾರಣ ರೂಪವಾದ ಪಾಶುಪತದೀಕ್ಷಾನಂತರವೆಂದು ಅರ್ಥವನ್ನು ಬರೆದಿರುತ್ತಾರೆ. ಮ ತ್ತು ಕೆ ಲ ವು ಸೂತ್ರಗಳಿಗೂ' ಶ್ರುತಿವಾಕ್ಯಗಳಿಗೂ ಲಿಂಗಧಾರಣ ಪರವಾಗಿ ಭಾಷ್ಯವನ್ನು ಬರೆದಿರುತ್ತಾರೆ.

'ಉಪಾಸನಾ ತ್ರೈವಿಧ್ಯಾತ್' (೧–೧–ಸೂತ್ರ ೩೨) ಎಂಬ ಸೂತ್ರ ಭಾಗಕ್ಕೆ ಇಷ್ಟಲಿಂಗ-ಪ್ರಾಣಲಿಂಗ-ಭಾವಲಿಂಗವೆಂಬ ಹೆಸರುಳ್ಳ ಪರಶಿವಬ್ರಹ್ಮೋಪಾಸನೆಯು ಮೂರು ವಿಧವೆಂದು ಪ್ರತಿಪಾದಿಸಿರುತ್ತಾರೆ. **'ತಸ್ಯಾಭಿಧ್ಯಾನಾದ್ಯೋಜನಾತ್ತತ್ವಭಾವಾದ್ಭೂಯಶ್ಚಾಂತೇವಿಶ್ವಮಾಯಾ ನಿವೃತ್ತಿಃ'** ಎಂಬ ಶ್ವೇತಾಶ್ವತರೋಪನಿಷತ್ತಿನ ವಾಕ್ಯದಲ್ಲಿ 'ಯೋಜನಾತ್' ಎಂದರೆ ಶರೀರದಲ್ಲಿ ಧಾರಣೆ ಮಾಡುವುದರಿಂದ ಎಂದು ಬಾಹ್ಯಲಿಂಗಧಾರಣೆಯೂ 'ಅಭೀಧ್ಯಾನಾತ್' ಎಂದರೆ ಮನಸ್ಸಿನಲ್ಲಿ ಧ್ಯಾನ ಮಾಡುವುದರಿಂದ ಎಂದು ಅಂತರ್ಲಿಂಗಧಾರಣೆಯೂ ಪ್ರತಿಪಾದಿತವಾಗುತ್ತದೆ ಎಂದು ಹೇಳಿರುತ್ತಾರೆ. ಮತ್ತು **'ಸರ್ವತ್ರ ಪ್ರಸಿದ್ಧೋಪದೇಶಾತ್'** (೧-೨-೧-) ಎಂಬ ಸೂತ್ರದ ಭಾಷ್ಯದಲ್ಲಿ ಹೀಗೆ ಪ್ರತಿಪಾದನೆ ಮಾ ಡಿ ರು ತ್ತಾ ರೆ. ಹಿಂದೆ ಅಲ್ಲಲ್ಲಿ

ಪ್ರಾಸಂಗಿಕವಾಗಿ ಸೂತ್ರಗಳಲ್ಲಿ ಲಿಂಗಧಾರಣೆಯನ್ನು ಪ್ರತಿಪಾದಿಸಿದ್ದರೂ ಸ್ಪಷ್ಟವಾಗಿ ಬಾಹ್ಯಲಿಂಗಧಾರಣೆಯನ್ನು ಪ್ರತಿಪಾದಿಸುವುದಕ್ಕಾಗಿಯೇ ಈ ಸೂತ್ರವು ಪ್ರವೃತ್ತ ವಾಗಿದೆ. 'ಸರ್ವತ್ರ' ಎಂದರೆ ವೇದ-ವೇದಾಂತ-ಆಗಮ-ಸ್ಮೃತಿ-ಪುರಾಣ-ಇತಿಹಾ ಸಾದಿಗಳಲ್ಲಿ ಪ್ರಸಿದ್ಧವಾದ ಪರಶಿವಲಿಂಗಧಾರಣೆಯು ಉಪಾಸನೆಯು ವಿಹಿತವಾಗಿರುತ್ತದೆ.

ತೈತ್ತಿರೀಯೋಪನಿಷತ್ತಿನಲ್ಲಿ 'ನಿಧನಪತಯೇ ನಮಃ' ಎಂದು ಮೊದಲಾದ 'ಊರ್ಧ್ವಲಿಂಗಾಯನಮಃ' ಮುಂತಾದ ವಾಕ್ಯಗಳಿಂದ ಲಿಂಗಕ್ಕೆ ಸರ್ವಾತ್ಮಕತ ವನ್ನು ಬೋಧಿಸಿ. 'ಏತತ್ಸೋಮಸ್ಯಸೂರ್ಯಸ್ಯ ಸರ್ವಲಿಂಗ ಸ್ಥಾಪಯತಿ। ಪಾಣಿಮಂತ್ರಂ ಪವಿತ್ರಂ' ಎಂಬ ವಾಕ್ಯದಿಂದ ಬಾಹ್ಯಲಿಂಗಧಾರಣೆಯು ವಿಹಿತವಾ ಗಿದೆ. ಈ ವಾಕ್ಯದಲ್ಲಿ 'ಸೋಮಸ್ಯ' ಎಂಬ ಪದಕ್ಕೆ ಉಮಯಾಸಹಿತಃ ಸೋಮಃ ಎಂದು ವ್ಯುತ್ಪತ್ತಿಯಿಂದ 'ಪಾರ್ವತೀಸಹಿತ ಪರಶಿವ' ಎಂಬರ್ಥವು. ಸೂರ್ಯಮಂಡಲ ಮಧ್ಯದಲ್ಲಿರುವ ಉಮಾಸಹಿತನಾದ ಪರಶಿವನ ಸ್ಫಟಿಕಲಿಂಗ ಮುಂತಾದ ನಾನಾ ಬಗೆಯ ಲಿಂಗವನ್ನು ಭೂಮಿಯಲ್ಲಿ ಸ್ಥಾಪಿಸುವುದು. ಮತ್ತು ಶರೀರದಲ್ಲಿ ಧರಿಸುವುದು ಎಂದು ಈ ವಾಕ್ಯವು ಬೋಧಿಸುತ್ತದೆ. 'ಪಾಣಿಮಂತ್ರಂ' ಎಂಬಲ್ಲಿ ಮಂತ್ರಪದಕ್ಕೆ 'ಮನನಾತ್ ತ್ರಾಯತೇ' ಎಂಬ ವ್ಯುತ್ಪತ್ತಿಯಿಂದ ನಿರಂತರವಾಗಿ ಚಿಂತನೆ ಮಾಡುವುದರಿಂದ ಕಾಪಾಡುವ ಲಿಂಗವು ಎಂದರ್ಥ, 'ಪಾಣಿಮಂತ್ರಂ ಎಂಬ ಪದ ದಿಂದ ಈ ಲಿಂಗವನ್ನು ಪೂಜೆಯ ಕಾಲದಲ್ಲಿ ವಾಮಹಸ್ತದಲ್ಲಿ ಧಾರಣೆ ಮಾಡಬೇ ಕೆಂದು ಪ್ರತಿಪಾದಿತವಾಗುತ್ತದೆ. 'ಪವಿತ್ರಂ" ಎಂಬ ಪದದಿಂದ ಅಶುಚಿಯಾದ ಶರೀರ ಸಂಬಂಧದಿಂದ ಲಿಂಗವು ಅಶುಚಿಯಾಗದೆ ಯಾವಾಗಲೂ ಶುಚಿಯಾಗಿರುವು ದೆಂದೂ ಈ ಪವಿತ್ರವಾದ ಲಿಂಗ ಸಂಬಂಧದಿಂದ ಶರೀರವು ಯಾವಾಗಲೂ ಪವಿತ್ರ ವೆಂದೂ ಪ್ರತಿಪಾದಿತವಾಗುತ್ತದೆ. ಈ ಅರ್ಥವು ವಾತೂಲಾಗಮದಲ್ಲಿ ಸ್ಫುಟವಾಗಿ ಹೀಗೆ ಹೇಳಲ್ಪಟ್ಟಿದೆ.

'ಪವಿತ್ರ ಕರಣಾತ್ಪುಂಸಾಂ ಪವಿತ್ರಮಿತಿ ಕಥ್ಯತೇ।
ತಸ್ಮಾತ್ಸರ್ವೇಷು ಕಾಲೇಷು ಧಾರಯೇಲ್ಲಿಂಗಮುತ್ತಮಂ॥
ಲಿಂಗಧಾರಿಸದಾಶುದ್ಧಃ॥

ತಾತ್ಪರ್ಯ:—ಮನುಷ್ಯರನ್ನು ಶುದ್ಧಿ ಮಾಡುವುದರಿಂದ ಲಿಂಗವು ಪವಿತ್ರಂ ಎಂದು ಹೇಳಲ್ಪಡುತ್ತದೆ. ಆದ್ದರಿಂದ ಎಲ್ಲ ಕಾಲದಲ್ಲಿಯೂ ಲಿಂಗಧಾರಣೆ ಮಾಡಬೇಕು. ಲಿಂಗ ಧರಿಸಿದವನು ಯಾವಾಗಲೂ ಶುದ್ಧನಾಗಿರುತ್ತಾನೆ.

ಬ್ರಹ್ಮಾದಿದೇವತೆಗಳಿಗೂ ಲಿಂಗಧಾರಣೆ : ಶ್ರೀಶ್ರೀಪತಿಪಂಡಿತಾಚಾರ್ಯರು 'ವಿಶ್ಲಿತಗುಣೋಪಪತ್ತೇಶ್ಚ' (೧-೨-೧) ಎಂಬ ಸೂತ್ರದ ಭಾಷ್ಯದಲ್ಲಿ ಬ್ರಹ್ಮಾದಿ

ದೇವತೆಗಳಿಗೂ ಸಪ್ರಮಾಣವಾಗಿ ಲಿಂಗಧಾರಣೆಯನ್ನು ಹೀಗೆ ಪ್ರತಿಪಾದಿಸಿರುತ್ತಾರೆ. ಲಿಂಗಪುರಾಣದಲ್ಲಿ ಜ್ಯೋತಿರ್ಲಿಂಗದ ಆವಿರ್ಭಾವವಾದ ಮೇಲೆ ಶ್ರೀ ಮಹಾವಿಷ್ಣುವು ಶ್ರೀ ಮಹಾದೇವನನ್ನು ಕುರಿತು 'ಎಲೊ ಮಹಾದೇವನೆ, ನನಗೂ ಬ್ರಹ್ಮನಿಗೂ ಸಹ ಶಿವದೀಕ್ಷೆಯೊಂದಿಗೆ ನಿನ್ನ ಲಿಂಗವನ್ನು ಅನುಗ್ರಹ ಮಾಡು' ಎಂದು ಪ್ರಾರ್ಥಿಸಲು-

'ಇಂದ್ರನೀಲಮಯಂ ಲಿಂಗಂ ವಿಷ್ಣವೇ ಬ್ರಹ್ಮಣೋಮಮ।
ಪದ್ಮರಾಗಮಯಂ ಲಿಂಗಂ ದತ್ವಾ ದೀಕ್ಷಾಂಚಕಾರಯತ್॥'

ಪರಶಿವನು ಇಂದ್ರನೀಲಮಯವಾದ ಲಿಂಗವನ್ನು ವಿಷ್ಣುವಿಗೂ, ಪದ್ಮರಾಗಮಯವಾದ ಲಿಂಗವನ್ನು ಬ್ರಹ್ಮನಿಗೂ ದೀಕ್ಷಾ ವಿಧಾನದಿಂದ ಕೊಟ್ಟನು. 'ವಕ್ಷಸ್ಥಲೇಹರಿರ್ಲಿಂಗಂ ಮೂರ್ಧ್ನಿಚಾಹಂಪಿತಾಮಹಃ' ವಿಷ್ಣುವು ಎದೆಯ ಮೇಲೆ ಬ್ರಹ್ಮನು ತಲೆಯ ಮೇಲೆ ಲಿಂಗವನ್ನು ಧರಿಸಿ ಸಂತುಷ್ಟರಾದರು ಎಂದು ಬ್ರಹ್ಮಾದಿಗಳಿಗೂ ಲಿಂಗಧಾರಣೆಯು ಹೇಳಲ್ಪಟ್ಟಿದೆ. ಹೀಗೆ ಶ್ರೀ ಶ್ರೀಪತಿಪಂಡಿತಾಚಾರ್ಯರು ಅನೇಕ ವೇದಾಂತ ಸೂತ್ರಗಳಿಗೂ ಶ್ರುತಿವಾಕ್ಯಗಳಿಗೂ ಲಿಂಗಧಾರಣ ಪರವಾಗಿ ವ್ಯಾಖ್ಯಾನವನ್ನು ಮಾಡಿರುತ್ತಾರೆ.

**ಸೂರ್ಯಮಂಡಲ ಮಧ್ಯದಲ್ಲಿ ಉಪಾಸ್ಯದೇವತಾ ವಿಚಾರ:**

ಛಾಂದೋಗ್ಯೋಪನಿಷತ್ತಿನಲ್ಲಿ 'ಅಥಯಏಷೋಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ' ಇತ್ಯಾದಿ ವಚನದಿಂದ ಸೂರ್ಯಮಂಡಲ ಮಧ್ಯದಲ್ಲಿ ಹಿರಣ್ಮಯ ಪುರುಷನ ಉಪಾಸನೆಯನ್ನು ಹೇಳಿ 'ತಸ್ಯಯಥಾಕಪ್ಯಾಸಂ ಪುಂಡರೀಕ ಮೇವಮಕ್ಷಿಣೀ' ಎಂದು ಆ ದೇವತೆಯ ಸ್ವರೂಪವನ್ನು ವರ್ಣಿಸಿದೆ. ಈ ವಾಕ್ಯದಲ್ಲಿರುವ 'ಅಕ್ಷಿಣೀ' ಎಂಬ ದ್ವಿವಚನಾಂತ ಪದದಿಂದ ಆ ದೇವತೆಗೆ ಎರಡು ಕಣ್ಣುಗಳು ಎಂದು ಸ್ಪಷ್ಟವಾಗಿ ತೋರುತ್ತದೆ. ಮತ್ತು ಈ ವಾಕ್ಯದ 'ಕಪ್ಯಾಸಂ' ಎಂಬ ಪದಕ್ಕೆ ಕೆಲವರು ವ್ಯಾಖ್ಯಾನಕಾರರು ಕಪಿಯ ಪೃಷ್ಠಭಾಗವೆಂದು ಅರ್ಥವನ್ನು ಸ್ವೀಕರಿಸಿ ಸೂರ್ಯಮಂಡಲದ ಮಧ್ಯದಲ್ಲಿರುವ ದೇವತೆಯ ಎರಡು ಕಣ್ಣುಗಳು ಕಪಿಯ ಪೃಷ್ಠ ಭಾಗದಂತೆ ಕೆಂಪಗಿರುವ ಪದ್ಮಕ್ಕೆ ಸಮಾನವಾಗಿವೆ ಎಂದು ವಿವರಿಸುತ್ತಾರೆ. ಪರಶಿವನಿಗಾದರೋ ಮೂರು ಕಣ್ಣುಗಳಿರುವುದರಿಂದ ಈ ವಾಕ್ಯದಲ್ಲಿ ಎರಡು ಕಣ್ಣುಗಳೆಂದು ಹೇಳಿರುವುದು ವಿರೋಧವಾಗುತ್ತದೆಂದು ಸಂದೇಹವು ತೋರುತ್ತದೆ. ಈ ಸಂದೇಹಕ್ಕೆ ಶ್ರೀ ಶ್ರೀಕಂಠಾಚಾರ್ಯರೂ ಶ್ರೀ ಶ್ರೀಪತಿಪಂಡಿತಾಚಾರ್ಯರೂ ಸಹ ತಮ್ಮ ಭಾಷ್ಯದಲ್ಲಿ 'ಅಂತಸ್ತದ್ಧರ್ಮೋಪದೇಶಾತ್' (೧-೧-೨೧) ಎಂಬ ಅಧಿಕರಣದಲ್ಲಿ ಒಂದೇ ವಿಧವಾದ ಸಮಾಧಾನವನ್ನು ಹೀಗೆ ಹೇಳಿರುತ್ತಾರೆ.

ಈ ವಾಕ್ಯದಲ್ಲಿ 'ಕಪ್ಯಾಸಂ' ಎಂಬ ಪದಕ್ಕೆ ಸೂರ್ಯನಿಂದ ಅರಳಿಸಲ್ಪಟ್ಟ ಎಂದರ್ಥ. ಹೇಗೆಂದರೆ-'ಕಮುದಕಂ ರಶ್ಮಿಭಿಃ ಪಿಬತೀತಿ ಕಪಿರಾದಿತ್ಯಃ। ತೇನಾ

ಸಿತಂ ವಿಕಸಿತಂ' 'ಕ' ಎಂಬ ಅಕ್ಷರಕ್ಕೆ ನೀರೂ ಎಂದೂ ಸೂರ್ಯನು ಕಿರಣಗಳಿಂದ ನೀರನ್ನು ಸ್ವೀಕರಿಸುವುದರಿಂದ 'ಕಪಿ' ಪದಕ್ಕೆ ಸೂರ್ಯನೆಂದೂ ಅರ್ಥ. ಸೂರ್ಯ ನಿಂದ ವಿಕಾಸಹೊಂದಿದ ಪದ್ಮದಂತಿರುವ ಎರಡು ಕಣ್ಣುಗಳುಳ್ಳ ದೇವತೆಯು ಎಂದರ್ಥ ವಾಗುತ್ತದೆ. ಶಿವನಿಗೆ ಮೂರು ಕಣ್ಣುಗಳಿದ್ದರೂ ಬೆಂಕಿಯ ರೂಪವಾದ ಮೂರನೇ ಕಣ್ಣು ಯಾವಾಗಲೂ ಮುಚ್ಚಿಕೊಂಡಿದ್ದು ಎರಡೇ ಕಣ್ಣುಗಳು ಅರಳಿದ ಪದ್ಮದಂತೆ ವಿಕಸಿತವಾಗಿರುವುದರಿಂದ 'ಅಕ್ಷಿಣೀ' ಎಂಬ ದ್ವಿವ ಚನಾಂತ ಪದವು ಶಿವನ ವಿಷಯ ದಲ್ಲಿ ವಿರುದ್ಧವಾಗುವುದಿಲ್ಲ.

**ಪರಶಿವನಿಗೆ ಶರೀರವಿದ್ದರೂ ಶರೀರ ಪ್ರಯುಕ್ತವಾದ ದೋಷಗಳಿಲ್ಲ:** 'ಉಮಾ ಸಹಾಯಂ ಪರಮೇಶ್ವರಂ ಪ್ರಭುಂತ್ರಿಲೋಚನಂ ನೀಲಕಂಠಂ ಪ್ರಶಾಂತಂ' ಇವೇ ಮುಂತಾದ ಪ್ರಮಾಣಗಳಿಂದ, ಪಾರ್ವತೀಸಹಿತವಾಗಿಯೂ ಮೂರು ಕಣ್ಣು ಗಳಿಂದ ರಮಣೀಯವಾಗಿಯೂ ನೀಲಕಂಠ ವಿಶಿಷ್ಟವಾಗಿಯೂ ಇರುವ ಪ್ರಶಾಂತ ದಿವ್ಯ ಮಂಗಳ ವಿಗ್ರಹವು ಪರಮೇಶ್ವರನಿಗೆ ಅಸಾಧಾರಣವಾದದ್ದೆಂದು ತಿಳಿದುಬರುತ್ತದೆ. ಈ ಶರೀರ ಸಂಬಂಧದಿಂದ ಪರಮೇಶ್ವರನಿಗೆ ದುಃಖಗಳೂ ಬರಬಹುದು ಎಂಬ ಆಕ್ಷೇ ಪಕ್ಕೆ ಇಬ್ಬರೂ ಭಾಷ್ಯಕಾರರು 'ಸಂಭೋಗ ಪ್ರಾಪ್ತಿರಿತಿಚೇನ್ನವೈಶೇಷ್ಯಾತ್' ಎಂಬ ಸೂತ್ರದ ಭಾಷ್ಯದಲ್ಲಿ ಹೀಗೆ ಸಮಾಧಾನವನ್ನು ಹೇಳಿದ್ದಾರೆ. ಪರಶಿವನ ಶರೀರವು ಜೀವಾತ್ಮರ ಶರೀರಕ್ಕಿಂತಲೂ ವಿಲಕ್ಷಣವಾದದ್ದು. ಜೀವಾತ್ಮರ ಶರೀರಗಳು ಅವರ ಹಿಂದಿನ ಕರ್ಮಗಳಿಂದ ಬಂದಿವೆ. ಪರಶಿವನ ಶರೀರವಾದರೋ ತನ್ನ ಇಚ್ಛೆಯಿಂದಲೇ ಸ್ವೀಕರಿಸಲ್ಪಟ್ಟಿರುವುದರಿಂದ ಕರ್ಮಗಳಿಂದ ಬಂದುದಲ್ಲ. ಕರ್ಮಮೂಲಕವಾದ ಶರೀರ ಸಂಬಂಧದಿಂದಲೇ ದುಃಖಗಳು ಪ್ರಾಪ್ತವಾಗುತ್ತವೆ. ಪರಶಿವನಾದರೋ 'ಅಪಹತ ಪಾಪ್ಮಾ' ಎಂಬ ಶ್ರುತಿವಚನದಿಂದ ಪಾಪಸಂಬಂಧವಿಲ್ಲದವನೆಂದು ಸಿದ್ಧವಾಗಿರುವುದ ರಿಂದ ಅವನಿಗೆ ಶರೀರ ಪ್ರಯುಕ್ತವಾದ ದುಃಖಗಳು ಸಂಭವಿಸುವುದಿಲ್ಲ.

**ಪ್ರಪಂಚವೆಲ್ಲವೂ ಪರಶಿವನ ಶರೀರವು:** ಪರಮೇಶ್ವರನಿಗೆ 'ಉಮಾ ಸಹಾಯಂ' ಎಂದು ಹಿಂದೆ ಹೇಳಿದ ಶ್ರುತಿಸಿದ್ಧವಾದ ದಿವ್ಯಮಂಗಳ ವಿಗ್ರಹವಲ್ಲದೆ ಪ್ರಪಂಚವೆಲ್ಲವೂ ಅವನ ಶರೀರವೆಂದು ಶ್ರೀ ಶ್ರೀಕಂಠಾಚಾರ್ಯರು 'ಸರ್ವತ್ರಪ್ರಸಿದ್ಧೋಪದೇಶಾತ್' (೧-೨-೧) ಎಂಬ ಅಧಿಕರಣದ ಭಾಷ್ಯದಲ್ಲಿ 'ಸರ್ವಚಿದಚಿತ್ಪ್ರಪಂಚ ಶರೀರ ವಿಶಿಷ್ಟ ಬ್ರಹ್ಮ' ಎಂದು ಹೇಳಿದ್ದಾರೆ. ಪ್ರಪಂಚವೆಲ್ಲವೂ ಪರಶಿವನ ಶರೀರವಾಗುವುದು ಹೇಗೆಂದರೆ: ೧) 'ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇವ್ಯಾಕರವಾಣಿ' ೨) 'ಯಃ ಪೃಥ್ವಿವ್ಯಾಂ ತಿಷ್ಠನ್ ಪೃಥಿವೀ ಮಂತರೋಯಮಯತಿ' ೩) 'ಯಸ್ಯಪೃಥಿವೀ ಶರೀರಂ' ಇವೇ ಮುಂತಾದ ಉಪನಿಷದ್ವಾಕ್ಯಗಳಿಂದ ಪರಶಿವನು ತನ್ನಿಂದ ನಿರ್ಮಿತವಾದ ವಸ್ತುಗಳಿಗೆ ನಾಮರೂಪ

ಗಳ ವ್ಯವಸ್ಥೆ ಮಾಡುವುದಕ್ಕಾಗಿ ಆ ವಸ್ತುಗಳಲ್ಲಿ ಆತ್ಮರೂಪದಿಂದ ಅನುಪ್ರವೇಶಮಾಡಿ ಅವುಗಳನ್ನು ನಿಯಮನ ಮಾಡುವುದರಿಂದ ಪೃಥಿವೀ ಮುಂತಾದ ಎಲ್ಲ ವಸ್ತುಗಳೂ ಪರಶಿವನ ಶರೀರವೆಂದು ಸಿದ್ಧವಾಗುತ್ತದೆ.

'ವಿಗ್ರಹಂ ದೇವದೇವಸ್ಯಜಗತೇತಚ್ಚರಾಚರಂ।
ಏತಮರ್ಥಂ ನಜಾನಂತಿ ಪಶವಃಪಾಶ ಗೌರವಾತ್'॥

ತಾತ್ಪರ್ಯ–ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಪರಮೇಶ್ವರನ ಶರೀರವಾಗಿದೆ. ಆದರೆ ಸಾಮಾನ್ಯ ಜನರು ಮಾಯಾಪಾಶದಿಂದ ಈ ಅರ್ಥವನ್ನು ತಿಳಿದುಕೊಂಡಿಲ್ಲ. ಎಂಬ ಪುರಾಣ ವಚನಗಳೂ ಸಹ ಪ್ರಪಂಚವೇ ಪರಮೇಶ್ವರನ ಶರೀರವೆಂಬುದನ್ನು ಸ್ಪಷ್ಟಪಡಿಸುತ್ತವೆ.

'ದೇಹಿನೋಯಸ್ಯಕಸ್ಯಾಪಿ ನಿಗ್ರಹಃಕ್ರಿಯತೇಯದಿ।
ಅನಿಷ್ಟಮಷ್ಟಮೂರ್ತೇಸ್ತನ್ನಾತ್ರ ಕಾರ್ಯಾವಿಚಾರಣಾ'॥

ಪ್ರಪಂಚವೆಲ್ಲವೂ ಪರಮೇಶ್ವರನ ಶರೀರವಾದ್ದರಿಂದ ಯಾವುದಾದರೊಂದು ಜಂತುವಿಗೆ ಪೀಡೆ ಮಾಡಿದರೂ ಅದು ಪರಮೇಶ್ವರನಿಗೇ ಅನಿಷ್ಟ ಮಾಡಿದಂತಾಗುತ್ತದೆ.

'ಸರ್ವೋಷಾಂ ಕಾರಕರಣಂ ಸರ್ವಾನುಗ್ರಹಣಂ ತಥಾ।
ಸರ್ವಾಭಯಪ್ರದಾನಂಚ ಶಿವಸ್ಯಾರಾಧನಂ ವಿದುಃ'॥

ತಾತ್ಪರ್ಯ- 'ಯಸ್ಯಾತ್ಮಾಶರೀರಂ' ಎಂಬ ಶ್ರುತಿವಚನದಿಂದ ಎಲ್ಲ ಜೀವರೂ ಪರಶಿವನ ಶರೀರನಾದ್ದರಿಂದ ಪರರಿಗೆ ಉಪಕಾರ ಮಾಡುವುದೂ, ಅಭಯಪ್ರದಾನಮಾಡುವುದೂ ಸಹ ಪರಮೇಶ್ವರನ ಪೂಜೆಯೇ ಆಗುತ್ತದೆ. ಹೀಗೆ ಪ್ರಪಂಚವೆಲ್ಲವೂ ಪರಮೇಶ್ವರನ ಶರೀರವಾದ್ದರಿಂದ ಯಾವ ವಸ್ತುವಿನಲ್ಲಿಯೂ ದ್ವೇಷಾಸೂಯೆಗಳನ್ನು ಮಾಡದೆ ಶಾಂತನಾಗಿರಬೇಕೆಂದು ವಿಸ್ತರವಾಗಿ ಪ್ರತಿಪಾದನೆ ಮಾಡಿರುತ್ತಾರೆ.

ಪ್ರಪಂಚವೆಲ್ಲವೂ ಪರಶಿವನ ಶರೀರವೆಂಬ ಶ್ರೀ ಶ್ರೀಕಂಠಾಚಾರ್ಯರ ಸಿದ್ಧಾಂತವನ್ನು ಶ್ರೀ ಶ್ರೀಪತಿಪಂಡಿತರು ತಮ್ಮ ಭಾಷ್ಯದ ಕೆಲವು ಪ್ರಕರಣಗಳಲ್ಲಿ ಹೇಳಿದ್ದರೂ ಕೆಲವು ಪ್ರದೇಶಗಳಲ್ಲಿ ಇದನ್ನು ನಿರಾಕರಿಸುತ್ತಾರೆ. ಶ್ರೀ ಶ್ರೀಕಂಠಾಚಾರ್ಯರು ಉದಾಹರಿಸಿರುವ 'ಯಸ್ಯಪೃಥಿವೀ ಶರೀರಂ' ಮುಂತಾದ ವಾಕ್ಯಗಳಿಗೆ ಪೃಥಿವ್ಯಾದಿಗಳು ಪರಮೇಶ್ವರನ ಶರೀರವೆಂಬ ಯಥಾಶ್ರುತಾರ್ಥದಲ್ಲಿ ಮುಖ್ಯ ತಾತ್ಪರ್ಯವಿಲ್ಲ. ಈ ಪ್ರಕರಣದಲ್ಲಿರುವ 'ಏಷತ ಆತ್ಮಾ ಅಂತರ್ಯಾಮ್ಯಮೃತಃ' ಎಂಬ ಪ್ರಧಾನ ವಾಕ್ಯಾನುಸಾರವಾಗಿ ಪರಮೇಶ್ವರನು ಸರ್ವಾಂತರ್ಯಾಮಿ ಎಂಬ ಅರ್ಥದಲ್ಲಿ ಎಲ್ಲ ವಾಕ್ಯಗಳಿಗೂ ಮುಖ್ಯ ತಾತ್ಪರ್ಯವೆಂದು ಪ್ರತಿಪಾದಿಸಿರುತ್ತಾರೆ.

ಮೋಕ್ಷಸ್ವರೂಪ:- ಮೋಕ್ಷಸ್ವರೂಪ ವಿಷಯದಲ್ಲಿ ಶ್ರೀಶ್ರೀಕಂಠಾಚಾರ್ಯ ರಿಗೂ, ಶ್ರೀಶ್ರೀಪತಿಪಂಡಿತಾಚಾರ್ಯರಿಗೂ ಮತಭೇದವಿರುತ್ತದೆ. ಶ್ರೀಶ್ರೀಕಂಠಾ ಚಾರ್ಯರು ಹೀಗೆ ಪ್ರತಿಪಾದಿಸಿರುತ್ತಾರೆ: 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ 'ಅಧಿಕಂತು ಭೇದನಿರ್ದೇಶಾತ್' ಇವೇ ಮುಂತಾದ ಅನೇಕ ಅಧಿಕರಣಗಳಲ್ಲಿ ಜೀವಾ ತ್ಮರಿಗೂ ಪರಬ್ರಹ್ಮ ಶಿವನಿಗೂ ಭೇದವನ್ನು ಸಿದ್ಧಾಂತ ಮಾಡಿರುವುದರಿಂದ ಮುಕ್ತಿಯ ಲ್ಲಿಯೂ ಸಹ ಜೀವಾತ್ಮರಿಗೂ ಶಿವನಿಗೂ ಭೇದವೇ ಇರುತ್ತದೆ. ಅಭೇದವಿಲ್ಲ 'ನಿರಂಜನಃ ಪರಮಂ ಸಾಮ್ಯಮುಪೈತಿ' ಎಂಬ ಸ್ಮೃತಿಯಿಂದಲೂ 'ಮುಕ್ತಃಶಿವಸ ಮೋಭವೇತ್' ಎಂಬ ಸ್ಮೃತಿಯಿಂದಲೂ ಪರಶಿವನ ಅತ್ಯಂತ ಸಾದೃಶ್ಯಪ್ರಾಪ್ತಿಯೇ ಮೋಕ್ಷವೆಂದೂ 'ಬ್ರಹ್ಮವೇದ ಬ್ರಹ್ಮೈವಭವತಿ' ಎಂಬ ಪದಕ್ಕೆ ಬ್ರಹ್ಮ ಸಾದೃಶ್ಯವೆಂದೇ ಅರ್ಥವೆಂದೂ 'ಅವಿಭಾಗೇನ ದೃಷ್ಟತ್ವಾತ್' ಎಂಬ ಅಧಿಕರಣದಲ್ಲಿ ಸಿದ್ಧಾಂತ ಮಾಡಿ ರುತ್ತಾರೆ 'ನಿರವಧಿಕ ಪರಮಾನಂದ ನಿಷ್ಕಲಂಕ ಶಿವತ್ವ ಪ್ರಾಪ್ತಿರ್ಹಿಮುಕ್ತಿಃ ಎಂಬ ಭಾಷ್ಯಭಾಗದಲ್ಲಿ ಶಿವತ್ವ ಪ್ರಾಪ್ತಿಯನ್ನು ಮುಕ್ತಿ ಎಂದು ಹೇಳಿದ್ದರೂ ಶಿವತ್ವವೆಂಬ ಪದಕ್ಕೆ 'ಶಿವತ್ವಂನಾಮ ನಿಖಿಲಮಲ ಸಂಪರ್ಕರಹಿತ ನಿರತಿಶಯ ಮಂಗಲಾಸ್ಪದತ್ವ ರೂಪ ಶಿವಸದೃಶಸ್ವಭಾವತ್ವಂ ಅಂದರೆ ಯಾವ ಮಲಸಂಬಂಧವೂ ಇಲ್ಲದೆ ನಿರತಿಶಯ ಮಂಗಳಗಳಿಗೆ ಆಧಾರವಾದ ಪರಶಿವನ ಸಾದೃಶ್ಯವೇ ಶಿವತ್ವವೆಂದು ತಾವೇ ವಿವರಣೆ ಮಾಡಿರುತ್ತಾರೆ. ಹಾಗೆಯೇ 'ಶಿವಸಾಯುಜ್ಯಂ' ಎಂಬ ಪದವನ್ನು ಭಾಷ್ಯದಲ್ಲಿ ಪ್ರಯೋಗ ಮಾಡಿದ್ದರೂ ಬೇರೆಯವರು ಹೇಳುವಂತೆ ಸಾಯುಜ್ಯ ಪದಕ್ಕೆ ಶಿವನಲ್ಲಿ ಅಭೇದ ಹೊಂದುವುದೆಂಬ ಅರ್ಥವನ್ನು ಹೇಳುವುದಿಲ್ಲ. 'ಉಕ್ತಂ ಬ್ರಹ್ಮಣಾಸಾ ದೃಶ್ಯಂ ಸಾಯುಜ್ಯಂ ಮುಕ್ತಾನಾಂ' ಎಂಬ ಗ್ರಂಥ ಭಾಗದಿಂದ ಮುಕ್ತರಿಗೆ ಬ್ರಹ್ಮಸಾಯುಜ್ಯ ವೆಂದರೆ ಬ್ರಹ್ಮಸಾದೃಶ್ಯವೆಂದೇ ಹೇಳಿರುತ್ತಾರೆ. ಆದ್ದರಿಂದ ಇವರ ಮತದಲ್ಲಿ ಶಿವನ ಅತ್ಯಂತ ಸಾದೃಶ್ಯವೇ ಮೋಕ್ಷವು.

ಮುಕ್ತರಿಗೂ ಪರಶಿವನಿಗೂ ಯಾವ ಅಂಶದಲ್ಲಿ ಸಾದೃಶ್ಯವೆಂದರೆ —'ಸೋಽ ಶ್ನುತೇ ಸರ್ವಾನ್ ಕಾಮಾನ್ ಸಹ ॥ ಬ್ರಹ್ಮಣಾವಿಪಶ್ಚಿತಾ' ಎಂಬ ವಚನದಿಂದ ಮುಕ್ತನು ಪರಶಿವನಂತೆ ದಿವ್ಯ ಸುಖಾನುಭವವನ್ನು ಹೊಂದುವನೆಂದು ತಿಳಿಯುವುದರಿಂ ದಿವ್ಯ ಸರ್ವ ಸುಖಾನುಭವದಲ್ಲಿ ಸಾದೃಶ್ಯವು ಸಂಭವಿಸುತ್ತದೆ ಮತ್ತು ಮುಕ್ತನಿಗೆ ಪಶುತ್ವ ನಿವೃತ್ತಿಯಾಗುವುದರಿಂದ 'ಸರ್ವಜ್ಞತ್ವ -ಅನಾದಿಬೋಧತ್ವ -ನಿತ್ಯತೃಪ್ತತ್ವ- ಸರ್ವಶಕ್ತಿಮತ್ವ -ಅಲುಪ್ತಶಕ್ತಿಕತ್ವ -ಅನಂತಶಕ್ತಿಮತ್ವ' ವೆಂಬ ಕಲ್ಯಾಣಗುಣಗಳೂ ಪ್ರಾಪ್ತವಾಗುತ್ತವೆ. ಈ ಗುಣಗಳು ಶಿವನಿಗೂ ಸ್ವಾಭಾವಿಕವಾಗಿಯೇ ಇರುವುದರಿಂದ ಮುಕ್ತರು ಶಿವಸದೃಶರಾಗುತ್ತಾರೆ. ಮುಕ್ತರು ಸ್ವತಂತ್ರರು ಎಂದರೆ ಇವರಿಗೆ ಪಶುತ್ವ ನಿವೃತ್ತಿಯಾಗಿ ಶಿವನ ಆಜ್ಞಾರೂಪವಾದ ವೇದಗಳ ವಿಧಿನಿಷೇಧ ಮಾರ್ಗಗಳಿಂದ ಬಿಡುಗಡೆ ಹೊಂದಿರುವುದರಿಂದ ಇವರಿಗೆ ಶಿವನು ನಿಯಾಮಕನಲ್ಲವೆಂದೂ 'ಅತಏವ

ಜ್ಞಾನಸ್ಯಾಧಿಪತಿಃ' ಎಂಬ ಅಧಿಕರಣದಲ್ಲಿ ಪ್ರತಿಪಾದಿಸಿರುತ್ತಾರೆ. ಹೀಗೆ ಮೋಕ್ಷಾ ವಸ್ಥೆಯಲ್ಲಿ ಪರಶಿವನಿಗೂ ಮುಕ್ತರಿಗೂ ಸಾದೃಶ್ಯವು ಪ್ರಾಪ್ತವಾಗುತ್ತದೆ. ಅಭೇಧ ವಿಲ್ಲ ಎಂದು ಶ್ರೀ ಶ್ರೀ ಕಂಠಾಚಾರ್ಯರ ಸಿದ್ಧಾಂತವು.

**ಮೋಕ್ಷ ವಿಷಯದಲ್ಲಿ ಶ್ರೀ ಶ್ರೀಪತಿಪಂಡಿತರ ಮತಃ** ಶ್ರೀ ಶ್ರೀಪತಿ ಪಂಡಿತಾಚಾರ್ಯರು 'ಅಧಿಕಂತು ಭೇದನಿರ್ದೇಶಾತ್' ಎಂಬ ಸೂತ್ರದ ಭಾಷ್ಯದಲ್ಲಿ ಮೋಕ್ಷದ ವಿಷಯದಲ್ಲಿ ಶ್ರೀ ಶ್ರೀಪತಿಪಂಡಿತಾಚಾರ್ಯರ ಮತವನ್ನು ನಿರಾಕರಿಸಿ ತನ್ನ ಮತವನ್ನು ಹೀಗೆ ಸಮರ್ಥನೆ ಮಾಡಿರುತ್ತಾರೆ. ಮುಕ್ತಾತ್ಮರಿಗೆ ದಿವ್ಯಮಂ ಗಳವಿಗ್ರಹ-ಸರ್ವಜ್ಞತ್ವ-ಸರ್ವೈಶ್ವರ್ಯ ಮೊದಲಾದ ಪರಶಿವನ ಸಾದೃಶ್ಯ ಪ್ರಾಪ್ತಿ ಯೇ ಮೋಕ್ಷವು. ಕೈವಲ್ಯಂ ಎಂದರೆ ಶಿವನಲ್ಲಿ ಅಭೇದವನ್ನು ಹೊಂದುವುದು ಎಂಬ ಮೋಕ್ಷವು ಸಂಭವಿಸುವುದಿಲ್ಲ ಎಂದು ಶ್ರೀಶ್ರೀಕಂಠಾಚಾರ್ಯರು ಹೇಳಿರು ವುದು ಯುಕ್ತವಲ್ಲ. ಶಿವನ ಸಾದೃಶ್ಯವೆಂಬ ಮೋಕ್ಷವು ಶ್ರುತಿಯಲ್ಲಿ ಪ್ರತಿಪಾದಿತ ವಾಗಿರುವಂತೆ ಶಿವನ ಅಭೇದರೂಪವಾದ ಕೈವಲ್ಯವೆಂಬ ಮೋಕ್ಷವೂ ಶ್ರುತಿವಚನಗ ಳಲ್ಲಿ ಪ್ರತಿಪಾದಿತವಾಗಿರುತ್ತದೆ.

**ಜೀವನೇ ಶಿವನಾಗುವನು :-** ಜೀವನು ಶಿವನಿಗಿಂತ ಭಿನ್ನವಾಗಿದ್ದು ಭೇದ ಮತ್ತು ಅಭೇದವು ಪರಸ್ಪರ ವಿರುದ್ಧವಾಗಿರುವುದರಿಂದ ಜೀವನಿಗೆ ಸ್ವಾಭಾವಿಕವಾದ ಜೀವತ್ವ ನಿವೃತ್ತಿಯಾಗಿ ಶಿವತ್ವವು ಪ್ರಾಪ್ತವಾಗುವುದು ಹೇಗೆಂದರೆ: ಸಂಸಾರದಿಶೆ ಯಲ್ಲಿ ಶಿವಜೀವರಿಗೆ ಭೇದವೂ ಮೋಕ್ಷದಿಶೆಯಲ್ಲಿ ಅಭೇದವೂ ಸಂಭವಿಸಬಹುದಾದ್ದ ರಿಂದ ಭೇದ ಮತ್ತು ಅಭೇದಕ್ಕೆ ಕಾಲಭೇದದಿಂದ ವಿರೋಧ ಪರಿಹಾರವಾಗುತ್ತದೆ. (೧) ಶುಕ್ತಿಜಲನ್ಯಾಯ (೨) ಲೋಹರಸನ್ಯಾಯ (೩) ಭ್ರಮರಕೀಟ ನ್ಯಾಯ (೪) ನದೀಸಮುದ್ರನ್ಯಾಯದಿಂದ ಕೆಲವು ವಸ್ತುಗಳು ಸ್ವಾಭಾವಿಕ ವಾದ ತಮ್ಮ ಸ್ವರೂಪವನ್ನು ಪಡೆಯುವ ಬಗೆಗೆ ಲೋಕ ಸಮ್ಮತವಾದ ಉದಾಹರ ಣೆಗಳೂ ಇವೆ

**೧) ಶುಕ್ತಿಜಲನ್ಯಾಯ :**

'ಶುಕ್ತಿಲಬ್ಧಜಲಂ ಲೋಕೇಮೌಕ್ತಿಕಂಭವತಿ ಧ್ರುವಂ ।
ಭಕ್ತಿಸಂಯುಕ್ತ ಜೀವೋಪಿ ಶಿವೋ ಭವತಿನಾನ್ಯಥಾ॥'

ಸಮುದ್ರದಲ್ಲಿ ಕಪ್ಪೆಯ ಚಿಪ್ಪುಗಳ ಮೇಲೆ ಬೀಳುವ ಸ್ವಾತೀ ಮಳೆಯ ನೀರಿನ ಹನಿ ಗಳು ತಮ್ಮ ನೀರಿನ ಸ್ವರದಪವನ್ನು ತೊರೆದು ಮುತ್ತಿನ ಮಣಿಗಳ ಸ್ವರೂಪವನ್ನು ಹೊಂದುವಂತೆ ದೃಢತರವಾದ ಭಕ್ತಿಯೋಗ ಬಲದಿಂದ ಜೀವನು ತನ್ನ ಸ್ವಾಭಾವಿ ಕವಾದ ಜೀವಭಾವವನ್ನು ತೊರೆದು ಶಿವನ ಸ್ವರೂಪವನ್ನು ಹೊಂದುವನು.

೨) **ಲೋಹರಸನ್ಯಾಯ :**

> ‹ರಸವೇಧಾದ್ಯಥಾಮ್ರ ಕಾಂಚನಂ ಭವತಿ ಧ್ರುವಂ ।
> ಗುರೋಃ ಕಟಾಕ್ಷವೇಧೇನ ಶಿವೋ ಭವತಿ ಶಂಕರಃ ॥

ತಾತ್ಪರ್ಯ–ಕೆಲವು ವಿಶಿಷ್ಟವಾದ ಓಷಧಿಗಳ ರಸಲೇಪನದಿಂದ ತಾಮ್ರವು ಚಿನ್ನವಾ ಗುವಂತೆ ಶ್ರೇಷ್ಠ ಸದ್ಗುರುವಿನ ಕಟಾಕ್ಷಪಾತದಿಂದ ಜೀವನು ಶಿವನಾಗುತ್ತಾನೆ.

೩) **ಭ್ರಮರಕೀಟನ್ಯಾಯ :-**

> 'ಭೃಂಗಧ್ಯಾನಾದ್ಯಥಾ ಕೀಟೋಭೃಂಗರೂಪೋಭವೇತ್ಸದಾ ।
> ಶಿವಧ್ಯಾನಾತ್ತಥಾಜೀವೊ ಶಿವೋಭವತಿನಾನ್ಯಥಾ ॥'

ಭೃಂಗದ ಗೂಡಿನಲ್ಲಿ ಸಿಕ್ಕಿರುವ ಕೀಟವು ಭಯದಿಂದ ನಿರಂತರವಾಗಿ ಭೃಂಗವನ್ನೇ ಧ್ಯಾನಮಾಡುತ್ತಿದ್ದು ಕೊನೆಗೆ ಆ ಕೀಟವೇ ಭೃಂಗರೂಪವನ್ನು ಹೊಂದುವಂತೆ ಜೀವನು ನಿರಂತರ ಶಿವಧ್ಯಾನದಿಂದ ಶಿವನೇ ಆಗುತ್ತಾನೆ.

೪) **ನದೀಸಮುದ್ರನ್ಯಾಯ :**

ಈ ನ್ಯಾಯವು ಉಪನಿಷತ್ತಿನಲ್ಲಿಯೇ ಹೀಗೆ ಪ್ರತಿಪಾದಿತವಾಗಿದೆ.

> ‹ಯಥಾನದ್ಯಃ ಸ್ಯಂದಮಾನಾಃ ಸಮುದ್ರೆ ಅಸ್ತಂಗಚ್ಛಂತಿನಾಮರೂಪೇ ವಿಹಾಯ
> ತಥಾವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ'

ಬೇರೆ ಬೇರೆಯಾದ ಹೆಸರನ್ನೂ ಆಕಾರವನ್ನೂ ಹೊಂದಿರುವ ಗಂಗಾದಿನದಿಗಳು ಸಮುದ್ರವನ್ನು ಹೊಂದಿದ ಮೇಲೆ ತಮ್ಮ ನಾಮರೂಪಗಳನ್ನು ಬಿಟ್ಟು ಸಮುದ್ರ ರೂಪವನ್ನು ಹೊಂದುವಂತೆ ಬ್ರಹ್ಮಜ್ಞಾನಿಯು ಜ್ಞಾನಯೋಗಬಲದಿಂದ ತನ್ನ ನಾಮ ರೂಪಗಳನ್ನು ಬಿಟ್ಟು ಪರಮಪುರುಷನಲ್ಲಿ ಐಕ್ಯವನ್ನು ಹೊಂದುತ್ತಾನೆ. ಈ ನ್ಯಾಯ ಗಳ ಉದಾಹರಣೆಗಳಿಂದ ಜೀವನಿಗೆ ಸ್ವಾಭಾವಿಕವಾದ ಜೀವ ಭಾವವು ನಿವಾರಣೆ ಯಾಗಿ ಮೋಕ್ಷದಶೆಯಲ್ಲಿ ಶಿವಭಾವವು ಪ್ರಾಪ್ತವಾಗುವುದೆಂದು ಸಿದ್ಧವಾಗುತ್ತದೆ.

ಮತ್ತು ‹ **ಬ್ರಹ್ಮವಿತ್ ಬ್ರಹ್ಮೈವ ಭವತಿ** " ಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿದವನು ಬ್ರಹ್ಮವೇ ಆಗುತ್ತಾನೆ ಇತ್ಯಾದಿ ಅನೇಕ ಶ್ರುತಿವಚನಗಳಿಂದ ಮೋಕ್ಷದಶೆಯಲ್ಲಿ ಜೀವನಿಗೆ ಶಿವಭಾವವು ಬೋಧಿತವಾಗಿರುತ್ತದೆ. ಆದ್ದರಿಂದ ಅಧಿ ಕಾರಿಗಳ ತಾರತಮ್ಯಕ್ಕೆ ಅನುಗಣವಾಗಿ ಸಾಲೋಕ್ಯ-ಸಾಮೀಪ್ಯ-ಸಾರೂಪ್ಯ-ಸಾಯು ಜ್ಯ (ಕೈವಲ್ಯ) ಎಂದು ಮೋಕ್ಷವು ನಾಲ್ಕು ವಿಧವಾಗಿ ಪ್ರಮಾಣ ಸಿದ್ಧವಾಗಿರು ತ್ತದೆ ಎಂದು ಶ್ರೀಶ್ರೀಪತಿಪಂಡಿತರಾಧ್ಯರ ಮತವು. (ಕೃಪೆ. ಸಿದ್ಧಗಂಗಾಶ್ರೀ)

# "ಆಸರೆ"

—ನ. ತಿ. ರಾಮಕೃಷ್ಣಯ್ಯ
(ಮುಂದುವರಿದ ಲೇಖನ)

ಮತ್ತೊಮ್ಮೆ ತಿರುಗಿ ನೋಡಿದಾಗಲೂ ದಾರಿಯಲ್ಲಿ ಅವಳಿಗೆ ತಿನ್ನಲು ಕೊಟ್ಟಿದ್ದ ಹಣ್ಣಿನ ಚೂರುಗಳು ಅನಿತಾಳ ಹಿಡಿಯಲ್ಲಿ ಪುಡಿಪುಡಿಯಾಗಿ ಜೆಲ್ಲಿ ಕಾಲ ಕೆಳಗೆ ಬಿದ್ದಿದ್ದವು ಅವಳ ಪರಿಸ್ಥಿತಿಯನ್ನು ನೋಡಿದ ಮಮತಾ ಮಾದವರ ಹೃದಯ ಬಾಯಿಗೆ ಬರುತ್ತಿತ್ತು. ಯಾರೂ ಅವಳನ್ನು ಮಾತನಾಡಿಸುವ ಗೋಜಿಗೆ ಹೋಗ ಲಿಲ್ಲ. ಹೋಗಿದ್ದರೂ "ಹಾಂ....ಹೂಂ...." ಎಂಬ ಎರಡೇ ಶಬ್ದ ಅವಳ ಬಾಯಿಂದ ಬರುತ್ತದೆ ಎಂದು ಇವರಿಗೆ ಗೊತ್ತು.

ಬಸ್ಸು ನಂದೀಬೆಟ್ಟವನ್ನು ತಲುಪಿದಾಗ ರಾತ್ರಿ ಹತ್ತು ಘಂಟೆಯ ಸಮಯ. ಇಳಿದ ಪ್ರವಾಸಿಗರೆಲ್ಲಾ ಸರಸರನೆ ತಾವು ಮೊದಲೇ ಕಾಯ್ದಿರಿಸಿದ್ದ ಕೊಠಡಿಯತ್ತ ಸಾಗಿದರು. ಆದರೆ ಇದ್ದಕ್ಕಿದ್ದಂತೆ ಹೊರಟುಬಂದ ಇವರಿಗೆ ರೂಮು ಸಿಗುವುದಾದರೂ ಎಂತು? ಏನು ಮಾಡುವುದು ಈ ನಡುರಾತ್ರಿಯಲ್ಲಿ ಎಂಬ ಚಿಂತೆ ಆವರಿಸಿತು. ಹಲ ವಾರು ಕಡೆ ವಿಚಾರಿಸಿದರೂ ಯಾವ ರೂಮುಗಳೂ ಖಾಲಿ ಇಲ್ಲ ಎಲ್ಲವೂ ಮೊದಲೇ ಬುಕ್ ಆಗಿವೆ ಎಂಬ ಒಂದೇ ಉತ್ತರ ಬರುತ್ತಿತ್ತು. ಸೂಟ್‌ಕೇಸ್ ಏರ್‌ಬ್ಯಾಗನ್ನು ಹೆಗಲಿಗೇರಿಸಿಕೊಂಡ ಮಾಧವ. ಊಟ ತಿಂಡಿಯ ಬುಟ್ಟಿಯನ್ನು ಬಲಗೈಲಿ ಹಿಡಿದು ಎಡಭುಜಕ್ಕೆ ಕ್ಯಾಮರಾ ಏರಿಸಿ ಎಡಗೈಲಿ ಅನಿತಾಳ ಭುಜದ ಮೇಲೆ ಕೈಯಿಟ್ಟು ಗಂಡ ನನ್ನು ಅನುಸರಿಸಿದಳು ಮಮತ. ಕೆಲಸದ ಆಳೊಬ್ಬ ಒಂದು ರೂಮಿಗೆ ಬೀಗ ತಗುಲಿಸಿ ಬ್ಯಾಟರಿ ಹಿಡಿದು ಇವರತ್ತ ಬರುತ್ತಿದ್ದ. ಅವನನ್ನು ತಡೆದು ಕೇಳಿದ ಮಾಧವ. "ಇಲ್ಲಿ ರೂಮು ಯಾವುದಾದರೂ ಸರಿ ಖಾಲಿ ಇದೆಯೆ?" ಎಂದು. ಆತ ತಟ್ಟನೆ "ಇಲ್ಲಾ ಸಾರ್" ಎಂದು ಉತ್ತರಿಸಿ ಮುಂದೆ ಸಾಗುತ್ತಿದ್ದ. ಮತ್ತೆ ಅವನನ್ನು ತಡೆದು "ಏನು ಮಾಡಬೇಕಪ್ಪಾ ಆಕಸ್ಮಿಕವಾಗಿ ಬಂದದ್ದಾಯಿತು ಅಂದಾಗೆ ಈಗ ನೀನು ಬೀಗ ಸಿಕ್ಕಿಸಿದ ರೂಮು ಯಾವುದು ಖಾಲಿ ಇರಬಹುದಲ್ಲ?" ಎಂದಾಗ ಹೌದು ಖಾಲಿ ಇದೆ. ಆದರೆ ಬೇರೆಯವರಿಗೆ ಬುಕ್ ಆಗಿದೆ. ಸಂಜೆ ಐದಕ್ಕೆ ಬರುತ್ತೇನೆಂದು ತಿಳಿಸಿದ್ದರು ಇನ್ನೂ ಬಂದಿಲ್ಲ. ಬರುತ್ತಾರೋ ಇಲ್ಲವೋ ತಿಳಿಯದು ಈಗ ಇರುವ ಬಸ್ಸುಗಳಂತೂ ಯಾವೂ ಇಲ್ಲ....ಅಂದಂಗೆ ತಾವು ಸಾಹೇಬರಿಗೆ ಭೆಟ್ಟಿ ಆದರೆ ಏನಾ ದರು ವ್ಯವಸ್ಥೆ ಮಾಡಬಹುದು, ಪ್ರಯತ್ನಿಸಿ" ಎಂದು ಹೇಳಿ ಅವರ ಕಛೇರಿಯನ್ನು ತೋರಿಸಿ ಹೊರಟು ಹೋದ.

ಇವರಿಬ್ಬರನ್ನೂ ಹೊರಗಡೆ ಕೂಡಿಸಿ ತಾನು ನಿಧಾನವಾಗಿ ಬಾಗಿಲ ಪರದೆಯನ್ನು ಸರಿಸಿ 'ಸರ್' ಎಂದ ಸೃದುವಾಗಿ. ತಿರುಗು ಕುರ್ಚಿಯಲ್ಲಿ ಇವನತ್ತ ಬೆನ್ನು ಮಾಡಿ ಕುಳಿತಿದ್ದ ವ್ಯಕ್ತಿ ಸರ್ರನೆ ತಿರಿಗಿ ಇತ್ತ ನೋಡಿದ. ಇಬ್ಬರ ಕಣ್ಣುಗಳನ್ನು ಸಂಬ ಧಿಸಿದವು. ಏನಾಶ್ಚರ್ಯ, "ಹೇ....ಮಾಧು ...ಹಾಯ್ ಪ್ರಭಾ" ಎಂದು ಒಮ್ಮೆಗೆ ಇಬ್ಬರೂ ತಬ್ಬಿಕೊಂಡುಬಿಟ್ಟರು. "ಏನೋ ಇದ್ದಕ್ಕಿದ್ದಹಾಗೆ ಪ್ರತ್ಯಕ್ಷ ಆಬ್ಬಾ... ಏನು ಬದಲಾಯಿಸಿಬಿಟ್ಟಿದ್ದೀಯಪ್ಪಾ.. ಕಾಲೇಜಿನಲ್ಲಿ ಓದುವಾಗಲೂ ಬಿಟ್ಟಿದ್ದ ನಿನ್ನ ಪುಡಿಜುಟ್ಟಿಲ್ಲಿ ಈಗಿನ ಸೀನೆಲ್ಲಿ" ಎಂದು ಗೇಲಿ ಮಾಡಿದ ಮಾಧವನನ್ನು. "ಅಲ್ಲೋ ಪ್ರಭಾಕರ್ ನೀನಿಲ್ಲಿ ಇರುವ ವಿಷಯವೇ ನನಗೆ ತಿಳಿದಿಲ್ಲ. ಎಲ್ಲಿ ಆರು ವರ್ಷಗಳಾ ಯಿತು. ಸಧ್ಯ ನೆನಪಾದರೂ ಇದೆಯಲ್ಲಾ. ಅಷ್ಟೇ ನನ್ನ ಪುಣ್ಯ" ಎಂದ. "ಅದಿರಲಿ ನಿನಗ್ಯಾಕೆ ಬಂತೋ ಈ ಗ್ರಹಚಾರ ಒಬ್ಬೊಂಟಿಗನಾಗಿ ಇಲ್ಲಿಗಾ ಬರೊದು?" ಎಂದು ಛೇಡಿಸಿದ ಪ್ರಭಾಕರ. "ಇಲ್ಲೋ ಮಹರಾಯ ಕಂಪನಿ ಸಮೇತ ಬಂದಿದ್ದೇನೆ ಇಲ್ಲೆ ಹೊರಗೆ ಇದ್ದಾರೆ' ಎಂದಾಗ....ಛೇ ಛೇ ಅಲ್ಲೇಕೆ ಕುಳ್ಳರಿಸಿದೆ ಒಳಗೆ ಕರೆ' ಎಂದ ಹೊರಗೆ ಹೋಗಿ ಇಬ್ಬರನ್ನೂ ಕರೆದುಕೊಂಡುಬಂದು "ಇವಳು ನನ್ನ ಶ್ರೀಮತಿ ಮಮತಾ ಎಂದಾಗ ಇಬ್ಬರೂ ಕೈಜೋಡಿಸಿದರು ಮಮತಾಳ ಬೆನ್ನಹಿಂದೆ ದೃಷ್ಟಿ ಯನ್ನು ನೆಲಕ್ಕೆ ನಟ್ಟು ನಿಂತಿದ್ದ ಅನಿತಾಳನ್ನು ತೋರಿಸುತ್ತಾ ಇವರು ನನ್ನ ಮಿಸಸ್ ಗೆಳತಿ ಅನಿತಾ ಎಂದಾಗ ಅತ್ತ ನೋಡಿದ ಪ್ರಭಾಕರ ಗರಬಡಿದವನಂತೆ ನಿಂತುಬಿಟ್ಟ ಸಟ್ಟನೆ ಎರಡು ಹೆಜ್ಜೆ ಮುಂದೆ ಬಂದ ಅನಿತಾಳ ತದಿಯದ ಬಾಯಿಂದ ಉರುಳಿತು 'ಪ್ರಭಾ'ಎಂಬ ಎರಡಕ್ಷರ. ಇವರಿಬ್ಬರೂ ವಿಸ್ಮಿತರಾಗಿ ನಿಂತುಬಿಟ್ಟರು. ಉಕ್ಕಿಬಂದ ಸಂತೋಷದ ಕಣ್ಣೀರು ಕೋಡಿಯಾಗಿ ಹರಿದು ಇಬ್ಬರೂ ಸಾಂತ್ವನಕ್ಕೆ ಬಂದಾಗ ಕೇಳಿದ್ದ ಮಾಧವ "ಹೌದು ನಿನಗೇಗೆ ಅನಿತಾಳ" ಪರಿಚಯ ಎಂದು ಆಶ್ಚರ್ಯದಿಂದ

ಅನಿತಾ ಪರಿಚಯವೇ. ನನ್ನ ಮೈಯಲ್ಲಿ ಹರಿಯುವ ಪ್ರತಿ ರಕ್ತದ ಕಣಕಣ ಗಳೂ ಸಹಾ ಅನಿತಾಳನ್ನು ನೆನೆಸುತ್ತಿರುತ್ತವೆ. -ನಾನು ಮೈಸೂರಿನಲ್ಲಿ ಓದು ತ್ತಿದ್ದಾಗ ಐದು ವರ್ಷದ ಹಿಂದೆ ಒಮ್ಮೆ ಸ್ಕೂಟರ್ ಆಕ್ಸಿಡೆಂಟಾಗಿ ಪರದೇಶಿ ಹೆಣದಂತೆ ಪ್ರಜ್ಞೆತಪ್ಪಿ ಬಿದ್ದಿದ್ದ ನನ್ನನ್ನು ಒಡಹುಟ್ಟಿದವನಂತೆ ಕಂಡು ಆಸ್ಪತ್ರೆಗೆ ಸೇರಿಸಿ ಇಂದಿನ ಈ ನನ್ನ ಸ್ಥಿತಿಗೆ ಅನಿತಾಳ ತಂದೆ ಶ್ರೀಪಾದರಾಯರನ್ನು ಮರೆಯಲು ಸಾಧ್ಯವೇ? ಅಪಘಾತದಲ್ಲಿ ವಿಪರೀತ ರಕ್ತ ಹೋಗಿ ಎಂದೋ ಈ ಪ್ರಪಂಚವನ್ನು ತ್ಯಜಿಸಬೇಕಿದ್ದ ನನಗೆ ಎರಡು ಸೀಸೆ ರಕ್ತವನ್ನು ದಾನನೀಡಿ ನನಗೆ ಪ್ರಾಣದಾನಕೊಟ್ಟ ತಾನು ಆಸ್ಪತ್ರೆ ಯಲ್ಲಿದ್ದು ಚೇತರಿಸಿಕೊಂಡ ಅನಿತಾಳನ್ನು ನಾನು ಮರೆಯಲಾದೀತೆ?. ಮರೆತರೂ ನನ್ನ ಮೈಯಲ್ಲಿ ಹರಿಯುತ್ತಿರುವ ರಕ್ತಕಣಗಳು ಅದರಿಂದ ಪ್ರಾಣದಾನ ಪಡೆದ ನನ್ನ ಪ್ರತಿ ಶ್ವಾಸವೂ ಮರೆಯಲಾರದು. ಕ್ಷಣ ಕ್ಷಣಕ್ಕೂ ಅನಿತಾ....ಅನಿತಾ....ಎಂದು ಸಾರುತ್ತವೆ ವಿಶ್ರಾಂತಿ ಪಡೆಯಲೆಂದು ನಾನು ಮೂರು ತಿಂಗಳು ಊರಿಗೆ ಹೋದಾಗ

ಈ ಎಲ್ಲ ಸಂಗತಿ ತಿಳಿದ ನನ್ನ ತಂದೆಯವರು ಶ್ರೀಪಾದರಾಯರ ದರ್ಶನ ಪಡೆದು ಅನಿತಾಳನ್ನು ಸೊಸೆಯಾಗಿ ಸ್ವೀಕರಿಸಿ ಋಣಮುಕ್ತರಾಗಲು ಪಟ್ಟ ಶ್ರಮ ಶ್ರಮ ವಾಗಿಯೇ ಉಳಿಯಿತು. ಅಷ್ಟರಲ್ಲಿ ಯಾವುದೋ ಖಾಸಗೀ ಕಂಪನಿಯಲ್ಲಿ ಕೆಲಸ ಸಿಕ್ಕಿ ಮೈಸೂರಿನಿಂದ ಮದರಾಸಿಗೆ ಇವರೆಲ್ಲಾ ಹೊರಟುಹೋದ ಸಂಗತಿ ತಿಳಿದು ಬಹಳ ವ್ಯಥೆಯಾಯಿತು. ಹುಡುಕಲು ಎಷ್ಟು ಪ್ರಯತ್ನಪಟ್ಟರೂ ಸಾರ್ಥಕವಾಗ ಲಿಲ್ಲ. ಅಂದಿನಿಂದ ನನಗೆ ಪ್ರಾಣದಾನ ಮಾಡಿದ ಅನಿತಾಳಿಗಾಗಿ ಪರಿತಪಿಸುತ್ತಾ ಇಂದಿಗೂ ಬ್ರಹ್ಮಚಾರಿಯಾಗಿ ಉಳಿಯಬೇಕಾಯಿತು, ಎಂದೆಲ್ಲಾ ತನ್ನ ವ್ಯಥೆಯನ್ನು ತೋಡಿಕೊಂಡ ಪ್ರಭಾಕರ.

"ಅಂದಹಾಗೆ ನಿನ್ನ ಕೆನ್ನೆಯ ಮೇಲೆ ಮೂಡಿರುವ ಹಸಿಗಾಯದ ಕಲೆ ಯಾವುದು ಅನಿತಾ" ಎಂದ ನೊಂದ ಮನದಿಂದ. ಅನಿತಾಳಿಗೆ ಹಿಂದಿನ ಗತ ಜೀವನದ ವ್ಯಥೆಯ ಚಿತ್ರ ತನ್ನ ಕಣ್ಣೆದುರು ಕಟ್ಟಿದಂತಾಗಿ ತಡೆಯದೇ ರೋಧಿ ಸಿದ್ದಳು. ಆ ಗಾಯದ ಕಲೆಯ ಕಾರಣವನ್ನು ಮಮತಾಳೇ ಹೇಳಬೇಕಾಯಿತು.

ಹುಟ್ಟಿದಾಗಲೇ ತಾಯಿಯನ್ನು ಕಳೆದುಕೊಂಡ ಅವಳಿ ಮಕ್ಕಳು ವನಿತಾ—ಅನಿತಾಳನ್ನು ತನ್ನೆರಡು ಕಣ್ಣುಗಳಂತೆ ಕಾಪಾಡಿದ್ದರು ಶ್ರೀಪಾದರಾಯರು. ತಾಯಿ ಯನ್ನು ತಿಂದುಕೊಂಡ ಅನಿಷ್ಠಪೀಳಿಗೆಯ ಮುಖ ನೋಡಬಾರದೆಂದು ಅವರ ಬಂಧುಬಾಂಧವರು ಸಂಬಂಧವನ್ನೇ ತೊರೆದು ದೂರ ಮಾಡಿದರು. ಹುಟ್ಟಿಸಿದ ದೇವರು ಹುಲ್ಲನ್ನಾದರೂ ಹಾಕದಿರುತ್ತಾನೆಯೇ? ಎಂಬಂತೆ ಹೇಗೋ ಈ ಹಾಗಲ್ಲದ ಹಸುಳೆಗಳು ಬೆಳೆದು ದೊಡ್ಡವರಾದರು. ಇವರು ಹುಟ್ಟಿದಮೇಲೆ ಶ್ರೀಪಾದರಾಯರ ಪರಿಸ್ಥಿತಿಯೂ ಕೆಡುತ್ತಾ ಬಂತು. ಕೊನೆಗೊಮ್ಮೆ ತಮ್ಮ ಸರಕಾರಿ ನೌಕರಿಯನ್ನು ಕಳೆದುಕೊಂಡು ಮನೆಯಲ್ಲಿ ಕೂಡುವ ಕಾಲಬಂತು. ಇದ್ದ ಎರಡಕೆರೆ ಹೊಲ ಈ ಮೂರು ಮಂದಿಯ ಹೊಟ್ಟೆಪಾಡಿಗೆ ತುತ್ತಾಯಿತು. ಶ್ರೀಪಾದರಾಯರಿಗೆ ಇರುವ ಮೂರಂಕಣದ ಮನೆಯೊಂದನ್ನು ಬಿಟ್ಟರೆ ಬೇರೆಅಸ್ತಿ ಎಂದರೆ ವನಿತಾ-ಅನಿತಾ ಇಬ್ಬರೆ. ಕಷ್ಟ ಬಂದರೆ ಕಾಲ ಉರುಳದಿರುತ್ತದೆಯೇ? ಎಂಬಂತೆ ಮಕ್ಕಳಿಬ್ಬರೂ ಮದುವೆಗೆ ಬಂದರು. ಸಾಕಷ್ಟು ಕಡೆ ಸುತ್ತಿ ಸೊರಗಿದ್ದರು ವರಶೋಧನೆಗಾಗಿ. ಹೋದೆಡೆ ಯಲ್ಲೆಲ್ಲಾ ಈ ಮಕ್ಕಳ ಬಗ್ಗೆ ತಾತ್ಸಾರದ ಮಾತುಗಳೇ. ತಾಯಿಯನ್ನು ತಿಂದುಕೊಂಡ ಅನಿಷ್ಠಗಳು ಎಂಬ ಸುದ್ದಿ ಗಾಳಿಯೊಡನೆ ಬೆರೆತು ಎಲ್ಲ ಕಡೆಗೂ ಹರಡಿಹೋಗಿದೆಯೇ ನೋಎಂಬಂತೆ ಭಾಸವಾಗುತ್ತಿತ್ತು ರಾಯರಿಗೆ. ಸಂಬಂಧಕೂಡಿ ಬಂದ ಒಂದೆರೆಡುಕಡೆ ಸಾವಿರಗಟ್ಟಲೇ ವರದಕ್ಷಿಣೆಯ ಒತ್ತಡದ ಹೊರೆಯನ್ನು ಹಾಕಿದ್ದರು. ಇರುವ ಮನೆ ಯೊಂದನ್ನು ಮಾರಿ ವನಿತಾಳ ಮದುವೆ ಮಾಡಿದರೆ ಮುಂದೆ ಅನಿತಾಳ ಗತಿಯೇನು? ಎಂದು ಯೋಚಿಸಿ ಕೊರಗಿ–ಕರಗಿ ಕೃಶರಾದ ರಾಯರಿಗೆ ಮತ್ತೊಂದು ಬರಸಿಡಿಲು

ಬಡಿಯಿತು. ಕೆರೆಗೆ ಬಟ್ಟೆ ಒಗೆಯಲು ಹೋಗಿದ್ದ ವನಿತಾ ಕಾಲುಜಾರಿ ಕೆರೆಯ ಪಾಲಾದಳು.

ಇತ್ತ ಜನ ವನಿತಾಳ ಸಾವಿನ ಬಗ್ಗೆ ಇಲ್ಲಸಲ್ಲದ ಸುಳ್ಳು ಪುಕಾರವನ್ನೆಬ್ಬಿಸಿ, ನೀತಿಗೆಟ್ಟ ಮಗಳ ತಂದೆ ಎಂದು ಇವರನ್ನು ಊರಿನಿಂದ ಬಹಿಷ್ಕರಿಸಿದ್ದರು. ಕಾದಸೀಸವನ್ನು ಕಿವಿಯಲ್ಲಿ ಬಿಟ್ಟಂತಹ ಕಠೋರ ಸಂಕಟವನ್ನು ತಡೆದುಕೊಂಡು ಬದಕಿದ್ದರು ಅನಿತಾಳಿಗಾಗಿ. ಆಕೆಯ ಬಾಳನ್ನು ಬೆಳಗಿಸುವ ಸಲುವಾಗಿ. ಇರುವ ಒಂದು ಮನೆಯನ್ನು ಮಾರಿ ಬರುವ ಹಣದಿಂದ ತಂಗಿಯ ಬಾಳು ಬೆಳಕಾದರೆ ಸಾಕು ನನ್ನೊಡಹುಟ್ಟುಬಳ್ಳಿ ಹಬ್ಬಿ ಬೆಳೆಯಲಿ ಎಂಬಂತೆ ತನ್ನ ಪ್ರಾಣವನ್ನೆ ತ್ಯಾಗ ಮಾಡಿದ್ದ ವನಿತಾಳ ಅಪಾರ ಔದಾರ್ಯವನ್ನು ಅರಿಯದಾಯಿತು ಸಮಾಜ.

ಅನಿತಾಳ ವರಶೋಧನೆಗಾಗಿ ಹೋದ ಕಡೆಯಲ್ಲೆಲ್ಲಾ ವನಿತಾಳ ಸಾವಿನ ಬಗ್ಗೆ ಕಾರಣ ಕೇಳುವವರೇ ವಿನಹ ಕನಿಕರಿಸುವ ಕೃಪಾಳು ಯಾರೂ ಕಾಣಲಿಲ್ಲ. ಕೊನೆಗೊಮ್ಮೆ ತನ್ನ ಬಾಲ್ಯ ಸ್ನೇಹಿತನ ಕಡೆಯಿಂದ ಒಂದು ಒಳ್ಳೆಯ ಸಂಬಂಧವೇ ಕೂಡಿಬಂತು. ಅದೂ ಇಪ್ಪತ್ತು ಸಾವಿರ ವರದಕ್ಷಿಣೆಯ ಬೆನ್ನೇರಿ. ಹುಡುಗ ಸುಂದರವಾಗಿದ್ದು ಸರ್ಕಾರಿ ವೈದ್ಯನಾಗಿ ಸೇವೆಸಲ್ಲಿಸುತ್ತಿದ್ದ. ಇದೇ ತಿಂಗಳು ಮೊನ್ನೆ ಆರನೆಯ ತಾರೀಖು ಅನಿತಾಳ ಮದುವೆ ಎಂದು ನಿಶ್ಚಯವಾಯಿತು. ಹುಡುಗ ಸರಕಾರಿ ನೌಕರಿ ಬಿಟ್ಟು ಸ್ವಂತ ನರ್ಸಿಂಗ್ ಹೋಂ ಕೊಳ್ಳುವ ಸಿದ್ಧತೆ ನಡೆಸಿದ್ದು ಹಣ ಸಾಲದಾದಾಗ ವರದಕ್ಷಿಣೆ ಎಂದು ಗೊತ್ತು ಮಾಡಿದ್ದ ಇಪ್ಪತ್ತು ಸಾವಿರ ಹಣವನ್ನು ಮುಂಗಡವಾಗಿ ಪಡೆದ. ಗೆಳತಿಯ ಮದುವೆಗೆಂದು ಮೂರು ದಿನ ಮುಂಚಿತವಾಗಿಯೇ ನಾವೆಲ್ಲ ಅವಳ ಊರಿ ಗೆ ಹೋಗಿದ್ದೆವು. ಸಂಭ್ರಮದಿಂದ ದಿನಗಳುರುಳಿದವು. ನನ್ನ ಗೆಳತಿ ಅನಿತಾಳ ಬಾಳಿನ ನಂದಾದೀಪವನ್ನು ಬೆಳಗುವ ಸಂಭ್ರಮದ ಆ ಮದುವೆಯ ದಿನವೂ ಬಂತು. ಮದುಮಗಳಾಗಿ ಹಸೆಮಣೆ ಏರಿ ತನ್ನಿನಿಯನಿಗೆ ತಲೆಬಾಗಿ ಕೈಹಿಡಿದು ಜೊತೆಗೂಡಿ ಕಷ್ಟಸುಖಗಳಲ್ಲಿ ಸಹ ಭಾಗಿಯಾದ ಸೌಭಾಗ್ಯವತಿ ಸುಮಂಗಲಿಯಾಗಿ ಬಾಳುವ ಆ ಆನಂದದ ದಿನವನ್ನು ನೋಡಿ ಕ್ರೂರ ವಿಧಿಗೆ ಇಲ್ಲಿಯೂ ಅಸೂಯೆ ಉಕ್ಕಿ ಬಂದಿರಬೇಕು. ಎಂತಲೇ ಬರಸಿಡಿಲಿನಂತೆ ಎ ರ ಗಿ ಬಂದಿತ್ತು. ''ವರನ ಸಮೇತ ಬರುತ್ತಿದ್ದ ಮದುವೆಯ ದಿಬ್ಬಣದ ಬಸ್ಸು ಆಕಸ್ಮಿಕವಾಗಿ ಹೊಳೆಗೆ ಬಿದ್ದು ಎಲ್ಲರೂ ಉಕ್ಕಿ ಹರಿಯುವ ಹೊಳೆಯ ಪಾಲಾದರೆಂದು" ಈ ಕಠೋರ ಸುದ್ದಿಯನ್ನು ಸಂಪೂರ್ಣವಾಗಿ ಕೇಳುವ ಮುಂಚಯೇ 'ಅನಿತಾ.... ಅಯ್ಯೋ ನನ್ನ ನನ್ನ ಕಂದಾ.... ಎಂಬ ಕೂಗಿನೊಡನೆ ಶ್ರೀಪಾದರಾಯರ ಪ್ರಾಣಪಕ್ಷಿ ಇಹಲೋಕವನ್ನು ತ್ಯಜಿಸಿ ಅಳಿಯನನ್ನು ಅರಸಿ ಹೊರಟಿತ್ತು ಆ ದಾರಿಯಲ್ಲಿ. ಬಾಳಿನುದ್ದಕ್ಕೂ ನೋವಿನ ನಂಜು ಎದುರಾದಾಗ, ಅದರ ಆಕ್ರಂದನದಲ್ಲಿ ಸಿಲುಕಿ

ನೊಂದು ಬೆಂದು ಕುಂದಿ ಹೋದ ಆ ದೇಹತಾನೆ ಹೇಗೆ ತಾನೆ ಸಹಿಸೀತು! ಮಗಳ ಇಂದಿನ ಈ ಸ್ಥಿತಿಯನ್ನು ನೋಡಿ ?........

ಕ್ಷಣಾರ್ಧದಲ್ಲಿಯೇ ನಂಬಲಸಾಧ್ಯವಾದ ಎಂತಹ ವಿಧಿಯ ವಿಪರ್ಯಾಸದ ತಿರುವು. ಹಸೆಮಣೆಯಲ್ಲಿ ಕುಳಿತು ಬಾಳಪುಟದ ಸುಂದರ ಕನಸನ್ನು ಕಾಣುತ್ತಿದ್ದ ಅನಿತಾ ಕ್ಷಣದಲ್ಲಿ ಚಿತೆಯಕೊಳ್ಳಿ ಹಿಡಿದು ತಂದೆಯ ಮರಣ ಹೋಮವನ್ನು ಎದುರಿಸಬೇಕಾಯಿತು. ಆ ರಣ ರುದ್ರಭೂಮಿಯಲ್ಲಿ ರಾಯರಿಗೆ ಅಗ್ನಿ ಏರಿಸಿದಾಗಲು ಊರಿನ ಒಂದು ನರಪಿಳ್ಳೆಯೂ ಇತ್ತ ಸುಳಿದು ನೋಡಿರಲಿಲ್ಲ. ಭುಗಿಲ್ ಎಂದು ಭೂವ್ಯಾಕಾಶವನ್ನು ಒಂದು ಮಾಡಿ ಆ ಬಡಕಲು ದೇಹದ ರಾಯರಿಗೆ ನಾಲಿಗೆ ಚಾಚಿ ನಿಂತಿತ್ತು ಅಗ್ನಿ. ತನ್ನನ್ನು ತಬ್ಬಲಿಯಾಗಿ ಬಿಟ್ಟು ಹೋಗುತ್ತಿರುವ ತಂದೆಯ ಜೊತೆಯೇ ತಾನೂ ಹೋಗುವೆನೆಂದು ಅನಿತಾ ಚಿತೆಯ ಮೇಲೆ ಹಾರಿಬಿದ್ದಾಗ ಆದ ಸುಟ್ಟ ಗಾಯದ ಕಲೆ ಇದು.

ಅವರ ಎಲ್ಲಾ ಕರ್ಮವಿಧಿಯನ್ನು ಮುಗಿಸಿಕೊಂಡು ಇಂದು ಇಂತಹ ವಾತಾವರಣದಿಂದ ಇವಳ ಮನಸ್ಸು ಪರಿವರ್ತನೆಯಾದೀತೆಂದು ಇಲ್ಲಿಗೆ ಬಂದೆವು. ಎಂದು ಅನಿತಾಳ ಕರುಳು ಕತ್ತರಿಸುವ ಕರುಣಾಜನಕ ದುರಂತ ಕಥೆಯನ್ನು ಸವಿಸ್ತಾರವಾಗಿ ಹೇಳುತ್ತಲೇ ನಾಲ್ವರೂ ಕಣ್ಣೀರಿನ ಕೋಡಿಯಿಂದ ತೋಯ್ದು ಹೋದರು.

ಆಗಲೇ ಮುಂಜಾವಿನ ಮಂದಹಾಸ. ಸುಮಾರು ಐದು ಗಂಟೆಯ ಸಮಯ ವಿರಬೇಕು. ಆಳು ತಂದಿತ್ತ ಚಹವನ್ನು ಎಲ್ಲರೂ ಕುಡಿದು ಮುಗಿಸಿ ಹೊರಗೆ ಬಂದು ಹಾಯಾಗಿ ಬೀಸಿ ಬಂದ ತಂಗಾಳಿಗೆ ಮೈಯೊಡ್ಡಿದರು.

ಅಂದೇ ಸೂರ್ಯೋದಯದ ಸಮಯಕ್ಕೆ ಸರಿಯಾಗಿ ನಂದೀಬೆಟ್ಟದಲ್ಲಿ ಪವಡಿಸಿರುವ ಯೋಗ ನಂದೀಶ್ವರನ ಸಾನಿಧ್ಯದಲ್ಲಿ ಅನಿತಾಳನ್ನು ಸತಿಯಾಗಿ ಸ್ವೀಕರಿಸಿ ಶಾಶ್ವತವಾದ ಅಪೂರ್ವ ಪ್ರೇಮ ಹಸ್ತದ " ಆಸರೆ " ನೀಡಿದ ಪ್ರಭಾಕರನ ಅಡಿದಾವರೆಗಳಿಗೆ ನಮಿಸಿ ಮೈಮರೆತಳು **ಅನಿತಾ.** ●

---

## ದಿವ್ಯಾಗಮಮೂರ್ತಿ

**—ಚನ್ನವೀರ ಜಂಗಮದೇವ**

ಶ್ರೀ ಗುರುಮೂರ್ತಿ ಮಂತ್ರಮಯ ಮದ್ಗುರುಮೂರ್ತಿ ಪವಿತ್ರಮೂರ್ತಿ ದಿ।
ವ್ಯಾಗಮಮೂರ್ತಿ ಸತ್ಯಮಯ ಮದ್ಗುರುಮೂರ್ತಿ ವಿವೇಕಮೂರ್ತಿ ಭ।
ಕ್ತಾಂಗವಿಚಾರಮೂರ್ತಿ ಕರುಣಾಕರಮೂರ್ತಿ ವಿಲಾಸಮೂರ್ತಿ ಲಿಂ।
ಗಾಂಗ ಸುಸಿದ್ಧಲಿಂಗ ಘನಮೂರ್ತಿಯದೀಗೆ ಮಹೋತ್ಸವಂಗಳಂ॥

# ಶರನ್ನವರಾತ್ರಿ

—ಚನ್ನಪ್ಪ ಎರೇಸೀಮೆ

ಷಡೃತುಗಳಲ್ಲಿ ಶರತ್ಕಾಲವೊಂದು ಸುಂದರ ಮುಖವಾಡ ಧರಿಸಿದ ಅನಂತ ರೂಪರಾಶಿಯ ಮನೋಹರ ಋತು. ಆಶ್ವೀಜ ಶುದ್ಧ ಪ್ರತಿಪದೆಯಿಂದ ಈ ಋತುವಿನ ಕಾಲ ಗಣನೆ. ಮಹಾ ಮಹಾ ಕವಿಗಳು ಈ ಋತುವಿನ ರೂಪರಾಶಿಗೆ ಮರುಳಾಗಿ ಅನೇಕ ಮುಖಗಳಲ್ಲಿ ಆ ಅನುಪಮ ಸೌಂದರ್ಯವನ್ನು ಅನುಭವಿಸಿ ವರ್ಣಿಸಿದ್ದಾರೆ. ಪ್ರಕೃತಿ ವಿಷಯದ ಈ ವರ್ಣನೆ ಜಗತ್ತಿನ ಆದಿಗ್ರಂಥವೆಂಬ ಕೀರ್ತಿಗೆ ಪಕ್ಕಾಗಿರುವ ಋಗ್ವೇದ ಮೊದಲ್ಗೊಂಡು ಇಂದಿನವರೆಗೂ ಹರಿದುಬಂದಿದೆ. ಆದಿ ಕವಿ ಕೀರ್ತಿಗೆ ಭಾಜನವಾಗಿರುವ ವಾಲ್ಮೀಕಿ ಮಹರ್ಷಿ ತನ್ನ ರಾಮಾಯಣದ ಸುಂದರ ಕಾಂಡದಲ್ಲಿ–

ಲೋಕಂ ಸು ವೃಷ್ಟ್ಯಾಪರಿತೋಷಯಿತ್ವಾ। ನದೀತಟಾಕಾನಿ ಚ ಪೂರಯಿತ್ವಾ॥
ನಿಷ್ಪನ್ನ ಸಸ್ಯಾಂ ವಸುಧಾಂಚಕೃತ್ವಾ। ತ್ಯಕ್ತ್ವಾ ನಭಸ್ತೋಯಧರಾಃ ಪ್ರನಷ್ಟಾ॥
ವ್ಯಪೇತ ಪಂಕಾಸು ಸುವಾಲುಕಾಸು। ಪ್ರಸನ್ನತೋಯಾಸು ಸಗೋಕುಲಾಸು॥
ಸಸಾರ ಸಾರಾವ ವಿನಾದಿತಾಸು। ನದೀಷು ಹೃಷ್ಟಾ ನಿಪತಂತಿ ಹಂಸಾಃ॥

ನದೀತೀರದ ಕೆಸರು ಕೊಚ್ಚಿಹೋಗಿ ಸುಂದರ ಮಳಲರಾಶಿ ಹರಡಿದೆ; ಅವುಗಳಲ್ಲಿ ತಿಳಿಯಾದ ನೀರು ಹರಿಯುತ್ತಿದೆ; ಬಳಿಯಲ್ಲಿ ಹಸುಗಳು ಸುಳಿದಾಡುತ್ತಿವೆ; ಸಾರಸ ಪಕ್ಷಿಗಳ ಧ್ವನಿ ಮೊಳಗುತ್ತಿದೆ; ಹಂಸಗಳು ತಂತಮ್ಮ ನಿವಾಸ ಸ್ಥಾನ ಬಿಟ್ಟು ಬಂದು ಎರಗುತ್ತಿವೆ.

ಲೋಕವನ್ನು ಸುವೃಷ್ಟಿಯಿಂದ ಸಂತೋಷಗೊಳಿಸಿ, ನದೀ ತಟಾಕಗಳನ್ನು ತುಂಬಿಸಿ, ನೆಲದಲ್ಲಿ ಹಸಿರನ್ನು ಹರಡಿ, ಮೋಡಗಳು ಆಕಾಶವನ್ನು ಬಿಟ್ಟು ಮೈಗರೆದವು. ನದೀ ತೀರದ ಕೆಸರು ಮಾಯವಾಗಿ ಮಳಲರಾಶಿ ಹರಡಿದೆ. ತಿಳಿನೀರು ಹರಿಯುತ್ತಿದೆ, ಬಳಿಯಲ್ಲಿ ಹಸುಗಳು ಸುಳಿದಾಡುತ್ತಿವೆ, ಸಾರಸ ಪಕ್ಷಿಗಳ ಧ್ವನಿ ಮೊಳಗುತ್ತಿದೆ. ಹಂಸಗಳು ತಂತಮ್ಮ ಗೂಡು ಬಿಟ್ಟು ಹಾರಿಬಂದು ಎರಗುತ್ತಿವೆ. ಹೀಗೆ ಅನೇಕ ಪ್ರಕಾರಗಳಲ್ಲಿ ವಾಲ್ಮೀಕಿಗಳ ಶರದ್ವರ್ಣನೆ ಚೇತೋಹಾರಿ. ಮುಂದೆ ಗುಪ್ತ ಸಾಮ್ರಾಜ್ಯದ ವೈಭವದ ಸುವರ್ಣ ಯುಗದ ಕಾಲದಲ್ಲಿದ್ದ ಲೋಕ ವಿಖ್ಯಾತ ಮಹಾಕವಿ ಕಾಳಿದಾಸ ಜಗತ್ತಿನ ಮೊದಲ ಭಾವಗೀತೆಯೆಂದು ವಿಶ್ವದ ವಿದ್ವಾಂಸ ಲೋಕದ ಹೊಗಳಿಕೆಗೆ ಪಾತ್ರವಾಗಿರುವ ತನ್ನ 'ಋತುಸಂಹಾರ' ಕಾವ್ಯದಲ್ಲಿ ಶರ

ದೃತುವಿನ ಸಮಗ್ರ ಸೌಂದರ್ಯದ ವಿರಾಡ್ದರ್ಶನಮಾಡಿ ಕಾವ್ಯ ರಸಾಸ್ವಾದನ ಪರಿಣತ ಮತಿಗಳ ಭಾವಭೂಮಿಯನ್ನೇ ಅನೇಕ ಸುಂದರ ಪ್ರಕೃತಿ ಚಿತ್ರಗಳಿಂದ ತುಂಬಿಸಿದ್ದಾನೆ.

1) ಕಾಶಾಂಶುಕಾವಿಕಚಪದ್ಮಮನೋಜ್ಞವಕ್ತ್ರಾ । ಸೋನ್ಮಾದ ಹಂಸರವ ನೂಪುರನಾದ ರಮ್ಯಾ ।
ಅಪಕ್ವ ಶಾಲಿರುಚಿರಾನತ ಗಾತ್ರಯಷ್ಟಿಃ । ಪ್ರಾಪ್ತ ಶರನ್ನವವಧೂರಿವ ರೂಪರಮ್ಯಾ ॥

2) ಕಾಶೈರ್ಮಹೀ, ಶಿಶಿರಧೀದಿತಿನಾ ರಜನ್ಯೋ । ಹಂಸೈರ್ಜಲಾನಿ ಸರಿತಾಂ ಕುಮುದೈಃ ಸರಾಂಸಿ ।
ಸಪ್ತಚ್ಛದೈಃ ಕುಸುಮಭಾರನತೈರ್ವನಾಂತಾಃ ಶುಕ್ಲೀಕೃತಾನ್ಯುಪವನಾನಿಚಮಾಲತೀಭಿಃ॥

ಶರದಿ ಕುಸುಮ ಸಂಗಾತ್ ವಾಯುವೋವಾಂತಿ ಶೀತಾ ।
ವಿಗತ ಜಲದವೃಂದಾ ಧಿಗ್ವಿಭಾಗಾ ಮನೋಜ್ಞಾಃ ।
ವಿಗತ ಕಲುಷ ಮಂಭಃ ಶ್ಯಾನಪಂಕಾ ಧರಿತ್ರೀ ।
ವಿಮಲ ಕಿರಣಚಂದ್ರಂ ವ್ಯೋಮತಾರಾ ವಿಚಿತ್ರಂ ॥ (ಋ. 3-22)

ವಿಕಚಕಮಲ ವಕ್ತ್ರಾ ಫುಲ್ಲನೀಲೋತ್ಪಲಾಕ್ಷೀ ।
ವಿಕಸಿತ ನವಕಾಶಶ್ವೇತವಾಸೋ ವಸಾನಾ ।
ಕುಮುದ ರುಚಿತಕಾಂತಿಃ ಕಾಮಿನೀವೋನ್ಮದೇಯಂ ।
ಪ್ರತಿದಿಶತು ಶರದ್ವಶ್ಚೇತಸಃ ಪ್ರೀತಿಮಗ್ರ್ಯಾಂ ॥ (ಋ-3-26)

ಹೀಗೆ ಮಹಾಕವಿ ಚೇತಸ್ಸಿಗೆ ಕಂಡ ಶರದೃತುವಿನ ಸೌಂದರ್ಯ 26 ಪದ್ಯಗಳಲ್ಲಿ ಅತ್ಯಂತ ಮನೋಹರವಾಗಿ ಮೂಡಿಬಂದಿದೆ, 'ಶರದ್ವನಿತೆ ಶ್ವೇತವರ್ಣದ ಶುಭ್ರವಾದ ಕಾಶಪುಷ್ಪಗಳ ಅಂಬರತೊಟ್ಟು, ಪ್ರಫುಲ್ಲ ಪದ್ಮಮುಖಿಯಾಗಿ, ಉನ್ಮತ್ತ ಹಂಸಧ್ವನಿ ವಿಶೇಷವೆಂಬ ನೂಪುರ ರಮ್ಯೆಯೆನಿಸಿ, ಪಕ್ವವಾದ ಬತ್ತದ ಬೆಳೆರೂಪದ ಸುಂದರಿಯೂ ಆಗಿ, ಬಾಗಿದಮುಖ, ಪುಷ್ಟಿಗೊಂಡ ದೇಹದಿಂದ ರೂಪರಮ್ಯೆಯೆನಿಸಿ ನವವಧುವಿನಂತೆ ಆಗಮಿಸಿದ್ದಾಳೆ. ಎತ್ತೆತ್ತಲೂ ಕಾಶಪುಷ್ಪದಿಂದ ಭೂದೇವಿಯೂ ಚಂದ್ರ ಪ್ರಕಾಶದಿಂದ ರಾತ್ರಿಯೂ, ಹಂಸಗಳಿಂದ ನದಿಗಳೂ, ಶ್ವೇತೋತ್ಪಲಗಳಿಂದ ಸರೋವರಗಳೂ, ಸಪ್ತಚ್ಛದ ವೃಕ್ಷಗಳ ಶ್ವೇತಪುಷ್ಪಭಾರದಿಂದ ಬಳುಕುತ್ತಿರುವ ಅರಣ್ಯ ಪ್ರದೇಶವೂ, ಶುಭ್ರವರ್ಣವಿಶಿಷ್ಟ ಪುಷ್ಪಕುಲದಿಂದ ಉಪವನಗಳೂ ನಯನಮನೋಹರವಾಗಿ ಕಾಣತೊಡಗಿವೆ.

ಈ ಋತುವಿನಲ್ಲಿ ಮಂದಮಾರುತಗಳು ಹೂವಿನ ಸುಗಂಧ ಹೊತ್ತು ಭಾರಗೊಂಡು ಮೆಲ್ಲಗೆ ಬೀಸುತ್ತವೆ. ಮಳೆಗಾಲದ ಮೋಡಗಳಿಲ್ಲದೆ ದಿಕ್ಕುಗಳೆಲ್ಲ ಪ್ರಸನ್ನಮುಖಮಂಡಲಗೊಂಡಿವೆ. ನದೀ ಸರೋವರಗಳ ನೀರು ತಿಳಿಗೊಂಡಿದೆ. ನೆಲದ ಕೆಸರೆಲ್ಲ ಒಣಗಿದೆ. ಚಂದ್ರ ಶುಭ್ರಕಿರಣಗಳಿಂದ ಕೂಡಿದ್ದಾನೆ. ನಕ್ಷತ್ರವೈಚಿತ್ರ್ಯ

ದಿಂದ ಗಗನಾಂಗಣ ಸುಂದರವಾಗಿದೆ. ಅರಳಿದ ಕಮಲಮುಖಿಯೂ, ಫುಲ್ಲಸೀಲೋತ್ಪಲನೇತ್ರೆಯೂ, ನವಕಾಶಪುಷ್ಪವಸನ ಧಾರಿಣಿಯೂ, ಕುಮುದಗಳ ಮನೋಹರ ಕಾಂತಿಯಿಂದ ಕೂಡಿದವಳೂ ಆದ ಶರದ್ವನಿತೆ ವರ್ಷಾಕಾಲದ ಜಿಗುಪ್ಸಾವಹ ದಿನಗಳನ್ನು ಹಿಂದೆಸರಿಸಿ ತನ್ನ ಅನಂತ ರೂಪರಾಶಿಯಿಂದ ವೈದೋರಿದಾಗ ಲೋಕದ ಜೀವರಾಶಿಗೆಲ್ಲ ನೂತನೋತ್ಸಾಹ; ಕೊನೆಯಲ್ಲಿ ಕವಿ ಶುಭಾಶಂಸನ ಮಾಡುತ್ತ ತನ್ನ ೨೬ ನೆಯ ಪದ್ಯದಲ್ಲಿ: ಅರಳಿದ ಕಮಲಮುಖಿಯೂ, ಪ್ರಫುಲ್ಲಸೀಲೋತ್ಪಲನೇತ್ರೆಯೂ, ಪ್ರಫುಲ್ಲ ನವಕಾಶ ಪುಷ್ಪಗಳೆಂಬ ವಸನಧಾರಿಣಿಯೂ, ಕುಮುದದಂತೆ ಮನೋಹರವಾದ ಕಾಂತಿಯಿಂದ ಕೂಡಿದವಳೂ ಆದ ಶರದ್ವನಿತೆ ಉತ್ಕಟಮದವುಳ್ಳ ಕಾಮಿನಿಯಂತೆ ನಿಮ್ಮ ಚಿತ್ತದಲ್ಲಿ ಶ್ರೇಷ್ಠವಾದ ಪ್ರೀತಿಯನ್ನಳವಡಿಸಿ ಆಹ್ಲಾದಗೊಳಿಸಲಿ, ಎಂದಿದ್ದಾನೆ. ಬಹುಶಃ ಈ ಋತುವು ಪ್ರಕೃತಿಪ್ರೇಮಿಗಳೆಲ್ಲರ ಕಣ್ಮನಗಳನ್ನು ಸೂರೆಗೊಂಡಿದೆ. ಆರು ಋತುಗಳಲ್ಲಿಯೂ ಒಂದೊಂದು ವೈಶಿಷ್ಟ್ಯವಿದೆ. ಪ್ರಕೃತಿ ವರ್ಷವೊಂದರಲ್ಲಿ ಋತುಮಾನಕ್ಕನುಸರಿಸಿ ಆರು ರೀತಿಯ ಮುಖವಾಡ ಧರಿಸಿ ಕಾಣಿಸಿಕೊಳ್ಳುವುದನ್ನು ನಮ್ಮ ಕವಿಗಳು ಪ್ರಾಚೀನ ಕಾಲದಿಂದಲೂ ಕಂಡುಂಡು ಆನಂದಿಸಿ ತಮ್ಮ ಆನಂದಾನುಭೂತಿಯನ್ನು ಕಾವ್ಯಮುಖದಲ್ಲಿ ಹಿಡಿದಿಟ್ಟು, ಚಿರನೂತನಗೊಳಿಸಿದ್ದಾರೆ. ಈಗ ಅಶ್ವಿಜ ಶುದ್ಧ ಪ್ರತಿಪದೆಯಿಂದ ಶರದ್ವನಿತೆ ಪದಾರ್ಪಣೆ ಮಾಡಿದ್ದಾಳೆ. ಅವಳ ಪ್ರಸನ್ನ ಗಂಭೀರ ಸ್ವರೂಪ ನಮ್ಮ ಮೈಮನಗಳನ್ನಾವರಿಸಿದೆ. ಕಾರಣ: ಮೋಡಗಳು ಶಕ್ತಿ ಗುಂದಿ ಬೆಳ್ಳಗಾಗಿ ಆಕಾಶರಾಜನ ಚಾಮರಸೇವೆ ಮಾಡುತ್ತಿವೆ. ಸೂರ್ಯ ತನ್ನ ತೇಜಸ್ಸಿಗೆ ಅಡ್ಡವಾಗಿದ್ದ ಮೇಘಗಳ ತೊಡಕಿನಿಂದ ಪಾರಾಗಿ ತೇಜಶ್ಶಾಲಿಯಾಗಿದ್ದಾನೆ. ಗಿರಿನದಿಗಳ ಅಬ್ಬರ ಮತ್ತು ಆರ್ಭಟ ಕುಂದಿ ತಿಳಿಗೊಂಡು ಜುಳು ಜುಳು ಮಂಜುಳ ನಿನಾದದಿಂದ ಹರಿಯುತ್ತಿವೆ. ಝಳಪಿಸುವ ಮಿಂಚು, ಎದೆನಡುಗಿಸುವ ಗುಡುಗುಗಳಿಲ್ಲ; ಆಲಿಕಲ್ಲುಗಳ ಕರ್ಕಶತ್ವ, ಬಿರುಗಾಳಿಯ ಭೀಕರತ್ವ, ಸರಿಮಳೆಸುರಿಮಳೆಯ ಸೆಳೆತವಿಲ್ಲ; ಸೋನೆಮಳೆ ತುಂತುಂರು ಮಳೆಯ ಕೀಸರಿಲ್ಲ. ದಶದಿಕ್ಕುಗಳು ಪ್ರಸನ್ನ ಗಂಭೀರಮುಖಮಂಡಲ ಧರಿಸಿವೆ. ಹಂಸಗಳು ತಮ್ಮ ಬಿಲದಿಂದ ಹೊರಬಂದು ನದಿಗಳ ಪುಳಿನ ಪ್ರದೇಶದಲ್ಲಿ ಮಂದಗಮನ ಮಾಡುತ್ತಲಿವೆ. ಹಕ್ಕಿಪಕ್ಷಿಗಳು ಮರಗಳ ರಂಬೆಕೊಂಬೆಗಳಲ್ಲಿ ಗರಿಬಿಚ್ಚಿ ಉತ್ಸಾಹದಿಂದ ಚಿಲಿಪಿಲಿಗುಟ್ಟುತ್ತಿವೆ. ಜಿಂಕೆ, ಸಾರಂಗಗಳು ಉಲ್ಲಾಸದಿಂದ ನಲಿಯುತ್ತ ಎಳೆಗರಿಕೆಯನ್ನಾರಿಸಿ ತಿಂದು ಮೆಲಕು ಹಾಕುತ್ತಿವೆ. ಕೆರೆಗಳು ಶುದ್ಧ ಜಲದಿಂದ ತುಂಬಿ ನಿಂತಿವೆ. ತಾವರೆ ಗೆಡ್ಡೆಗಳು ಮೊಳೆತು ಹೂಗಳು ಅರಳಿ ನಿಂತಿವೆ. ಹೊಲಗದ್ದೆಗಳ ಪೈರುಪಚ್ಚೆ ಹುಲುಸಾಗಿ ಬೆಳೆದಿವೆ. ಹೀಗೆ ನೂರಾರು ಸಾವಿರಾರು ಸೌಂದರ್ಯಗಳನ್ನು ಹೊತ್ತು ಶರದ್ವನಿತೆ ಕಾಣಿಸಿಕೊಂಡಿದ್ದಾಳೆ ಇಂಥ ಸುಂದರ ಪ್ರಕೃತಿ

ತಿಯನ್ನು ಕಂಡೋ ಏನೋ ಪ್ರೈಮರಿತ ನಮ್ಮ ಋಷಿಗಳು ತಮ್ಮ ಬಾಳು ಇಂಥ ನೂರು ಶರದೃತುಗಳನ್ನು ನೋಡುವಂತಾಗಲೆಂದು ಶಾಂತಿ ಮಂತ್ರ ಹೇಳುತ್ತಿದ್ದಾರೆ.

ಪಶ್ಯೇಮ ಶರದಶ್ಶತಂ
ಜೀವೇಮ ಶರದಶ್ಶತಂ ।
ನಂದಾಮ ಶರದಶ್ಶತಂ ।
ಮೋದಾಮ ಶರದಶ್ಶತಂ ।
ಭವಾಮ ಶರದಶ್ಶತಂ ।
ಶೃಣವಾಮ ಶರದಶ್ಶತಂ ।
ಪ್ರಭ್ರವಾಮ ಶರದಶ್ಶತಂ ।
ಅಜೀತಾಸ್ಯಾಮ ಶರದಶ್ಶತಂ ।

—ಇದರ ಅರ್ಥ: ನೂರು ವರ್ಷ ನಮ್ಮ ಕಣ್ಣು ನೋಡುವಂತಿರಲಿ, ನೂರುವರ್ಷ ಆಯುಷ್ಯವಿರಲಿ, ನೂರು ವರ್ಷಗಳವರೆಗೆ ಸಮೃದ್ಧಿಯಿರಲಿ, ನೂರು ವರ್ಷದವರೆಗೆ ಆನಂದವಿರಲಿ, ನೂರು ವರ್ಷ ಸಾಮರ್ಥ್ಯವಿರಲಿ, ನೂರು ವರ್ಷ ಕಿವಿಗಳು ಕೇಳುವ ವಂತಿರಲಿ, ನೂರು ವರ್ಷ ವಾಗ್ಧೋರಣೆ ಚೆನ್ನಾಗಿರಲಿ, ನೂರು ವರ್ಷ ಸೋಲಾ ಗದಿರಲಿ.

ಭಾರತೀಯ ಜನಜೀವನದಲ್ಲಿ ವರ್ಷಕ್ಕೊಮ್ಮೆ ಬರುವ ಶರದೃತುವೊಂದು ದೊಡ್ಡ ತಿರುವು ಇದೊಂದು ಋತುಬದಲಾವಣೆಯ ಘಟ್ಟ. ಸುಂದರ ಪ್ರಕೃತಿಯ ಅಟ್ಟಹಾಸ. ಸಾಮಾನ್ಯ ಮನುಷ್ಯನಿಂದ ಹಿಡಿದು ರಾಜಮಹಾರಾಜ ಚಕ್ರವರ್ತಿ ಗಳವರೆಗಿನ ವಿವಿಧ ಮಟ್ಟದ ಜನಗಳೂ ಎತ್ತೆತ್ತಲೂ ಬಿತ್ತರಂಬಡೆದು ಸೌಂದರ್ಯದ ಸೊಬಗನ್ನು ಬೀರುವ ಪ್ರಕೃತಿದೇವಿಯ ವೈಭವಾಡಂಬರದ ಮಧ್ಯದಲ್ಲಿ ಮನವುಟ್ಟಿ, ಅತ್ಯು ತ್ಸಾಹದಿಂದ ಈ ಶರದೃತುವಿನ ಮೊದಲ ಒಂಬತ್ತು ದಿನಗಳನ್ನೇ 'ಶರನ್ನವರಾತ್ರಿ' ಎಂದು ಕರೆದು ಹಬ್ಬದುಬ್ಬಿನಲ್ಲಿ ಪ್ರೈಮರಿತು ಹತ್ತನೆಯ ದಿನ ವಿಜಯದಶಮಿಯ ನ್ನಾಚರಿಸಿ ತೃಪ್ತಿಯ ನಿಟ್ಟುಸಿರುತ್ತಾರೆ. ಪ್ರಾಚೀನಕಾಲದಿಂದಲೂ ಈ ಋತು ಬಂದಾಗ ಮಹಾನವಮಿ, ಭೂಮಿ ಹುಣ್ಣಿಮೆ, ದೀಪಾವಳಿಗಳೆಂಬ ಮೂರು ಮಹ ತ್ವದ ಹಬ್ಬಗಳನ್ನು ನಮ್ಮ ಜನ ಹಿಂದಿನಿಂದ ಉತ್ಸಾಹದಿಂದ ಆಚರಿಸುತ್ತ ಬಂದಿದ್ದಾರೆ. ಗ್ರಾಮಾಂತರ ಪ್ರದೇಶದ ಸ್ತ್ರೀಯರು ಮಹಾನವಮಿ ಹಬ್ಬದ ಸಡಗರದಲ್ಲಿ ಹೀಗೆ ಹಾಡುತ್ತ ಬಂದಿದ್ದಾರೆ.

ಮಾನೌಮಿ ಬಂತೆಂದು ತುಂಬೆನೆರಡಾರತಿಯ ।
ಜಾಜತುಂಬೇನೆ ಜಗುಲಿಗೆ । ಅಣ್ಣಯ್ಯನ
ತೇಜಿಗಾರುತಿಯ ಬೆಳಗೇನೆ. ॥
ಬಂಜಿ ಬಾಗಿಲಮುಂದ ಬಂಗಾರದೊಳಕಲ್ಲು ।
ಬಂದು ಕುಟ್ಟಾಕ ಸೊಸೆಯಿಲ್ಲ । ಮಾನೌಮಿ
ಬನ್ನಿ ಮುಡಿಯಾಕ ಮಗನಿಲ್ಲ ॥

ಸೀಗಿಮುನ್ನ ಮೊಹಬ್ಬ ಸಿರಿ ನನ್ನ ಮಗಳಿಗೆ ।
ಮಾನೌಮಿ ಹಬ್ಬ ಮಗನ್ಹಬ್ಬ । ಮುಂದಿರುವ।
ದೀವಳಿಗಿ ಹಬ್ಬ ಅಳಿಯನದೂ॥

—ಹೀಗೆ ಶರತ್ಕಾಲದ ಈ ಮೂರು ಹಬ್ಬಗಳ ಬಗೆಗೆ ಹಾಡಿಕೊಂಡು ಸಂತೋಷ ಗೊಳ್ಳುತ್ತಿದ್ದರೆ, ಇಂದಿನ ರೀತಿಯ ವಿದ್ಯಾಭ್ಯಾಸ ಪದ್ಧತಿಯಿಲ್ಲದಿದ್ದ ಹಿಂದಿನ ಕಾಲ ಗಳಲ್ಲಿ ಶಾಲಾಬಾಲಕರು ತಮ್ಮ ಗುರುಗಳನ್ನು ಮುಂದಿಟ್ಟುಕೊಂಡು ಮನೆ ಮನೆಗಳ ಮುಂಭಾಗಕ್ಕೆ ಬಂದು ನಿಂತು—

ಆಶ್ವೀಜ ಶುದ್ಧ ಮಾನೌಮಿ ಬರಲೆಂದು
ಲೇಸಾಗಿ ಹರಸಿದೆವು ಬಾಲಕರು ಬಂದು।
ಸ್ವಸ್ತಿ ಶ್ರೀರಸ್ತು ಸಕಲೈಶ್ವರ್ಯಮಸ್ತು ।
ವಸ್ತು ವಾಹನಪೂಜ್ಯ ಸಾಮ್ರಾಜ್ಯಮಸ್ತು ।
ಅಸ್ತು ನವರತ್ನ ಕಂಠಾಭರಣಮಸ್ತು ।
ಅಸ್ತು ರಾಜೇಂದ್ರಂಗೆ ದೀರ್ಘಾಯುಮಸ್ತು ।

ಮುಖಕಮಲದಲ್ಲಿ ನೆಲಸಿದ ಭಾಗ್ಯಲಕ್ಷ್ಮಿ ।
ಸುಖವಾಗಿ ಭುಜದಮೇಲಿಪ್ಪ ವರಲಕ್ಷ್ಮಿ ।
ಅಕಳಂಕನು ರದಮೇಲಿಪ್ಪ ಜಯಲಕ್ಷ್ಮಿ ।
ಸಕಲ ಭಾಗ್ಯವ ಕೊಡಲಿ ಮಹಾಲಕ್ಷ್ಮಿ ॥

—ಹೀಗೆ ಹರಕೆ ಹೊತ್ತು ನೂರಾರು ಮಾನೌಮಿ ಚೌಪದನಗಳನ್ನು ಹಾಡಿ ಎಂದೂ ನಗದವರ ಮುಖದಲ್ಲೂ ನಗೆ ಚಿಮ್ಮಿಸುತ್ತಾರೆ. ಇರುವ ಹನ್ನೆರಡು ಮಾಸಗಳಲ್ಲಿ ಆಶ್ವಿಜಮಾಸವೇ ಚೆಂದವೆಂದು ಇವರ ತೀರ್ಮಾನ. ಈ ಹಬ್ಬ ಅವರ ಉತ್ಸಾಹದ ಒಂದು ಘಟ್ಟ. ಒಂದು ದಿನದ ಹಬ್ಬವಲ್ಲ ಇದು ಹತ್ತು ದಿನಗಳ ಹಬ್ಬ; ವಿಜಯೋತ್ಸಾಹದಿಂದ ವೈಮೆರೆಯುವ ಹಬ್ಬ.

ಶರನ್ನವರಾತ್ರಿಯ ಹಬ್ಬ ಕೇವಲ ಕರ್ನಾಟಕದ ಹಬ್ಬವಲ್ಲ; ಸಮಗ್ರ ಭಾರ ತೀಯರ ಹಬ್ಬ; ಭಾರತೀಯ ವಿವಿಧ ವರ್ಗಗಳಲ್ಲಿ ಭಾವೈಕ್ಯವನ್ನೂ ಸಮರಸವನ್ನು ಉಂಟುಮಾಡುವ ರಾಷ್ಟ್ರೀಯ ಹಬ್ಬ; ಸಾಮಾಜಿಕ ಸಂಬಂಧಗಳನ್ನು ಬಿಗಿಗೊಳಿ ಸುವ ಹಬ್ಬ. ಭಕ್ತಿ, ಪ್ರೀತಿ, ಸ್ನೇಹ ವಿಶ್ವಾಸಗಳನ್ನು ಬೆಸೆಯುವ ಉತ್ಸಾಹದ ಹಬ್ಬ ಕ್ಷಾತ್ರತೇಜವನ್ನು ಉದ್ದೀಪನಗೊಳಿಸುವ ಹಬ್ಬ ಒಂದೊಂದು ರಾಜ್ಯದಲ್ಲಿ ಸ್ಥಳೀಯ ಸನ್ನಿವೇಶಕ್ಕನುಗುಣವಾಗಿ ವೈವಿಧ್ಯಮಯವಾಗಿ ಆಚರಿಸುವ ಶಕ್ತಿಯ ಉಪಾಸನೆಯ ಹಬ್ಬ. ಭಾರತ ತಾಯಿ; ಅವಳು ಆದಿಶಕ್ತಿ. ವಿವಿಧ ಪ್ರಾಂತಗಳು ಆ ಆದಿಶಕ್ತಿಯ ವಿವಿಧರೂಪಗಳು.

ಉತ್ತರ ಭಾರತ ವಾಯುವ್ಯ ಭಾರತದ ಕೆಲವು ಭಾಗಗಳಲ್ಲಿ ಈ ಹಬ್ಬವನ್ನು 'ರಾಮಲೀಲಾ' ಎಂದು ಆಚರಿಸುತ್ತ ಶ್ರೀರಾಮನು ರಾವಣನೊಡನೆ ನಡೆಸಿದ ಕದನ, ಅದರಿಂದ ಲೋಕಕ್ಕಾದ ಕ್ಷೇಮ ಸಂಕೇತವಾಗಿ ಒಂಬತ್ತು ದಿನಗಳು ರಾಮ ಕಥಾ ಕಾಲಕ್ಷೇಪಮಾಡಿ ದಶಮಿಯ ದಿನ ರಾವಣ ಕುಂಭಕರ್ಣಾದಿ ರಾಕ್ಷಸ ಸಂಹಾರ ಮಾಡಿದಂತೆ ಹಬ್ಬವನ್ನಾಚರಿಸಿದರೆ, ಮಹಾರಾಷ್ಟ್ರದಲ್ಲಿ ಶಕ್ತಿದೇವತೆಯ ಉಪಾಸನೆಯ ಜೊತೆಗೆ ಶಿವಾಜಿಮಹಾರಾಜನು ಭವಾನಿದೇವಿಯಲ್ಲಿಟ್ಟ ಭಕ್ತಿ ವಿಶ್ವಾಸಗಳ ಪರಂಪರೆಯೊಡನೆ ಹಬ್ಬದ ಆಚರಣೆ ಹತ್ತು ದಿನ ನಡೆದು ಹೋಗುತ್ತದೆ. ರಾಜಸ್ಥಾನ ಪ್ರದೇಶದಲ್ಲಿ ಹಿಂದಿನ ರಾಜಮಹಾರಾಜರ ಕಾಲದಲ್ಲಿದ್ದಂತೆ ಇಂದಿಗೂ ಈ ಹಬ್ಬವನ್ನು ಸೈನಿಕರ ಉತ್ಸವವನ್ನಾಗಿಯೇ ಆಚರಿಸುತ್ತಾರೆ. ಹಳೇಕಾಲದ ಆಯುಧಾದಿಗಳ ಪೂಜೆ, ಶಕ್ತಿದೇವತಾರ್ಚನೆ, ಮೊದಲಾದವುಗಳು ಉತ್ಸಾಹದಿಂದ ನಡೆಯುತ್ತವೆ. ಬಂಗಾಳದಲ್ಲಿಯಂತೂ ಈ ಉತ್ಸವವನ್ನು ದುರ್ಗಾಪೂಜೆಯೆಂದೇ ಆಚರಿಸುತ್ತಾರೆ. ದುರ್ಗಾದೇವಿಯ ಪ್ರತಿಷ್ಠೆಯನ್ನು ಮಹಾಲಯ ಅಮಾವಾಸ್ಯೆಯ ದಿನವೇ ಮಾಡಿ ಪ್ರತಿದಿನ ಸಾಮೂಹಿಕವಾಗಿ ಪೂಜೋತ್ಸವ ಮಾಡಿದರೂ ನವಮಿಯ ದಿನದ ಪೂಜೆಗೆ ವಿಶೇಷ ಮಹತ್ವವಿದೆ. ವಿಜಯದಶಮಿಯ ದಿನ ಪ್ರತಿಮೆಯ ಉತ್ಸವ ಮಾಡಿ ವಿಸರ್ಜನೆ ಮಾಡುವುದುಂಟು. ಒರಿಸ್ಸಾ ದೇಶದಲ್ಲಿ ದುರ್ಗಾದೇವಿಯ ಪ್ರತಿಮೆಯ ಜೊತೆಗೆ ಮಹಾದೇವನ ಪ್ರತಿಮೆಯನ್ನು ಪೂಜಿಸಿ ಹತ್ತು ದಿನಗಳು ಉತ್ಸಾಹಪೂರ್ಣ ಹಬ್ಬವನ್ನಾಚರಿಸುವುದುಂಟು. ದಕ್ಷಿಣ ಭಾರತದ ಎಲ್ಲಕಡೆಗೂ ಈ ಹಬ್ಬ ಶಕ್ತಿಯ ಸಂಕೇತವಾಗಿ ಆಚರಿಸಲಾಗುತ್ತಿದೆ. ಕರ್ನಾಟಕದಲ್ಲಿಯಂತೂ ಈ ಹಬ್ಬದ ಆಚರಣೆ ವಿಜಯನಗರ ಚಕ್ರವರ್ತಿಗಳಿಂದ ಅನಂತರ ಮೈಸೂರು ರಾಜರುಗಳಿಂದ ವಿಶ್ವವಿಖ್ಯಾತವಾಗಿ ಆಚರಿಸಲ್ಪಡುತ್ತಿತ್ತು.

ಮಹಾನವಮಿ ಹಬ್ಬ ಪುರಾಣ ಕಾಲದಿಂದಲೂ ಭಾರತೀಯರಿಂದ ಆಚರಿಸಲ್ಪಡುವ ಶಕ್ತಿದೇವತೆಯ ಉಪಾಸನೆಯ ಹಬ್ಬ. ಮಹಾಭಾರತದ ವಿರಾಟಪರ್ವದಲ್ಲಿ ಬರುವ ಉತ್ತರ ಗೋಗ್ರಹಣದ ವಿಜಯ ನಡೆದುದು ವಿಜಯ ದಶಮಿಯ ದಿನವೇ ಎಂದು ಹೇಳಲಾಗುತ್ತಿದೆ. ಅಜ್ಞಾತವಾಸಕಾಲದಲ್ಲಿ ಶಮೀವೃಕ್ಷದಲ್ಲಿ ಬಚ್ಚಿಟ್ಟಿದ್ದ ಗಾಂಡೀವವನ್ನು ಬೃಹನ್ನಳೆಯ ವೇಷದ ಅರ್ಜುನ ಪಡೆದು ಕೌರವರನ್ನು ಸೋಲಿಸಿ ವಿರಾಟನಿಗೆ ವಿಜಯವನ್ನು ತಂದು ಕೊಟ್ಟ ಕಥೆ ಪ್ರಸಿದ್ಧ. ಉತ್ತರನಿಂದ ಯುದ್ಧ ಅಸಾಧ್ಯವೆಂದು ಕಂಡ ಬೃಹನ್ನಳೆಯ ವೇಷದ ಅರ್ಜುನ ವಿರಾಟನ ಉಪಕಾರದ ಋಣ ತೀರಿಸಲು ರಣರಂಗದಿಂದ ನೇರವಾಗಿ ಶಮೀವೃಕ್ಷದ ಕಡೆಗೆ ರಥವನ್ನು ಓಡಿಸಿದನು.

ತಾಂ ಶಮೀಮ್ ಅಭಿಗಂತವ್ಯ ಪಾರ್ಥೋವೈರಾಟಿಮಬ್ರವೀತ್ ।
ಸುಖ ಸಂವರ್ಧಿತಂ ಪಿತ್ರಾ ಸಮರಾಣಾಮಕೋವಿದಂ ॥ (ವಿ. ಪ. 40-33)
ಏಹಿ ಭೂಮಿಂಜಯಾ ರುಷ್ಯ ವೈರಾಟೀ ಮುಪಶೀಂಶಮೀಂ ।
ಸಮಾದಿಷ್ಟೋ ಮಯಾಕ್ಷಿಪ್ರಂ ಧನುರ್ಗಾಂಡೀವ ಮಾನಯ ॥ (ವಿ. ಪ. 40-34)

ಹೀಗೆ ಶಮೀವೃಕ್ಷದಲ್ಲಿರುವ ತನ್ನ ಶಸ್ತ್ರಾಸ್ತ್ರ ಪಡೆದಂತೆ, ವಿಜಯ ಸಾಧಿಸಿದಂತೆ ಭಾರತದಲ್ಲಿ ಹೇಳಲಾಗಿದೆ. ಶಮೀ ವೃಕ್ಷಕ್ಕೂ ವಿಜಯದಶಮಿಗೂ ನಿಕಟ ಸಂಬಂಧ. ಶಮಿಯೂ ಶಕ್ತಿದೇವತೆಯೇ. ಅವಳನ್ನು ಅಗ್ನಿಗರ್ಭೆಯೆಂದು ಹೇಳುವುದುಂಟು. ಅಗ್ನಿಯು ಶಮೀ ವೃಕ್ಷದಲ್ಲಿ ಇದ್ದೂ ಇಲ್ಲವ ಜೆಡಗಿನಿಂದ ಅಂತರ್ಗತನಾಗಿದೆಯೆಂತೆ ಇದರ ಪ್ರಾಯೋಗಿಕ ಸತ್ಯವನ್ನು ಇಂದಿನ ವಿಜ್ಞಾನಿಗಳು ಕಂಡು ಹೇಳಬೇಕು. ಹಿಂದೆ ಯಾಗಸಮಯದಲ್ಲಿ ಅರಣಿಯನ್ನು ಉಜ್ಜಿ ಅಗ್ನಿಯನ್ನು ಪಡೆಯುವಾಗಿನ ಮರದ ಕೊರಡುಗಳು ಶಮೀಕೊರಡುಗಳೇ ಆಗಿರಬಹುದೇ ? ಯೋಚಿಸುವ ಅಂಶವಾಗಿದೆ. ವಿಜಯ ದಶಮಿಯ ದಿನ ಶಮೀ ಪೂಜೆ. ಶಮೀದಳಗಳನ್ನು ಒಬ್ಬರಿಂದೊಬ್ಬರಿಗೆ ಬಂಗಾರವೆಂದು ಕೊಡುವುದುಂಟು. ಈ ಸಂಪ್ರದಾಯದಲ್ಲಿ ಸಾಮಾಜಿಕ ಘಟನೆ ಯಿದೆ. ವಿರೋಧಿಗಳೆನಿಸಿದರೂ ಅವರಲ್ಲಿಗೆ ಹೋಗಿ ಶಮೀದಳ ಕೊಟ್ಟು ನಮಸ್ಕಾರ ಪ್ರತಿನಮಸ್ಕಾರಗಳೊಡನೆ ವಿರೋಧ ಮರೆಯುವ ಈ ಸಂಪ್ರದಾಯ ಹಿಂದೂ ಸಂಸ್ಕೃತಿಯ ಒಂದು ಶ್ರೇಷ್ಠ ಸಂಪ್ರದಾಯವೆಂದು ಹೇಳದಿರಲಾಗದು.

ಶಮೀದಳಗಳಿಗೆ ಬಂಗಾರವೆಂದು ಹೇಳುವುದಕ್ಕೆ ಕಾಳಿದಾಸ ಮಹಾಕವಿಯ ರಘುವಂಶದ ೫ ನೇ ಸರ್ಗದಲ್ಲಿ ಬರುವ ಒಂದು ಕಥೆಯನ್ನು ನಮ್ಮವರು ಜೋಡಿಸುವುದುಂಟು. ಆ ಕಥೆ ಹೀಗೆ : ರಘುಮಹಾರಾಜ ವಿಶ್ವಜಿದ್‌ಯಾಗಮಾಡಿ ತನ್ನ ಐಶ್ವರ್ಯವನ್ನೆಲ್ಲ ದಾನಮಾಡಿ ಮಣ್ಣಿನ ಪಾತ್ರೆಗಳಲ್ಲಿ ಊಟ ಮಾಡುವ ಸ್ಥಿತಿಗೆ ಬಂದ ಸಮಯ. ಆಗ ಕೌತ್ಸನೆಂಬ ಓರ್ವ ವಟುವು ವರತಂತುವೆಂಬ ಮುನಿಗಳಲ್ಲಿ ವಿದ್ಯಾಭ್ಯಾಸ ಮುಗಿಸಿ, ಅವರಿಗೆ ಕೊಡಬೇಕಾದ ಗುರುದಕ್ಷಿಣೆಯ ೧೪ ಕೋಟಿ ಧನಕ್ಕಾಗಿ ರಘುಮಹಾರಾಜನಲಿ ಯಾಚನೆಗೆ ಬಂದ. ರಘುವಿನ ಬೊಕ್ಕಸ ಬರಿದಾಗಿತ್ತು. ರಘುಮಹಾರಾಜನು ಕುಬೇರನ ಬೊಕ್ಕಸಕ್ಕೆ ದಾಳಿಯಿಡಲು ಮನಸ್ಸು ಮಾಡಿದ. ಇದನ್ನರಿತ ಕುಬೇರ ಅಪಾರ ದ್ರವ್ಯವನ್ನು ರಘುವಿನ ಬೊಕ್ಕಸಕ್ಕೆ ಸುರಿಸಿದ. ಈ ಅಪಾಗ ಧನ ಶಮೀವೃಕ್ಷಗಳಿರುವ ವನದ ಮೇಲೆ ಸುರಿಸಿದನಂತೆ. ಅಂದಿನಿಂದ ಶಮೀದಳಗಳು 'ಬಂಗಾರ' ವೆಂಬ ಹೆಸರು ಪಡೆದುವೆಂದು ಹೇಳುವುದುಂಟು. ಚಾರಿತ್ರಿಕವಾಗಿ ಇಂಥ ಕಥೆಗಳಿಗೆ ಕೈಕಾಲಿಲ್ಲದಿದ್ದರೂ ಶಮೀದಲವಲ್ಲಿರುವ ಮಹತ್ವವನ್ನು ಈ ಮೂಲಕ ನಮ್ಮವರು ಪ್ರಚಾರ ಮಾಡಿರಬಹುದು. ಶಮೀವೃಕ್ಷ, ಅದರ ಎಲೆಗಳು ಉಪಯುಕ್ತ ವಸ್ತುಗಳಾಗಿರಬೇಕು. ಬಿಲ್ವ ಮತ್ತು ತುಲಸಿಗಳು ಅತ್ಯುಪಯುಕ್ತ ವನಸ್ಪತಿಗಳೆಂದು ಪೂಜ್ಯತೆ ಪಡೆದಂತೆ ಶಮಿಯೂ ಪೂಜ್ಯವಸ್ತು.

ಗುಪ್ತ ಚಕ್ರವರ್ತಿಗಳ ಕಾಲ ಭಾರತದ ಇತಿಹಾಸದಲ್ಲಿ 'ಸುವರ್ಣಯುಗ' ಎಂದು ಕರೆಯಿಸಿಕೊಂಡಿದೆ. ಭಾರತೀಯತೆಯ ಭಾವವನ್ನು ಸಮಸ್ತ ಭಾರತೀಯರಿಗೆ ಉಂಟುಮಾಡಿದವರು ಈ ಚಕ್ರರ್ವಗಳೇ. ಈ ಚಕ್ರವರ್ತಿಗಳ ಕಾಲದಲ್ಲಿದ್ದ ಕಾಳಿದಾಸ ಮಹಾಕವಿಯ ರಘುವಂಶ ಮಹಾಕಾವ್ಯದಿಂದ ಇಕ್ಷ್ವಾಕು ಕುಲದ ರಘು ಚಕ್ರವರ್ತಿ ದಿಗ್ವಿಜಯ ಮಾಡಿದುದು ಶರತ್ಕಾಲದಲ್ಲಿಯೇ ಎಂದು ತಿಳಿದುಬರುತ್ತದೆ. ಆ ಕಾಲದಲ್ಲಿ ಭಾರತಕ್ಕೆ ಉಂಟಾಗುತ್ತಿದ್ದ ಹೂಣರೇ ಮೊದಲಾದ ಪರಕೀಯರ ದಾಳಿಗಳನ್ನು ಸಮುದ್ರಗುಪ್ತ ಚಕ್ರವರ್ತಿ ಹಿಮ್ಮೆಟ್ಟಿಸಿದ ಅಂಶ.

ತತ್ರ ಹೂಣಾವರೋಧಾನಾಂ ಭರ್ತೃಷು ವ್ಯಕ್ತವಿಕ್ರಮಮ್ ।
ಕಪೋಲ ಪಾಟಲಾದೇಶಿ ಬಭೂವ ರಘು ಚೇಷ್ಟಿತಂ ॥ (ರ. ವಂ. ೪. ೬೮)

ಈ ರಘುವಿನ ದಿಗ್ವಿಜಯ ಕಾಲದ ಅಂಶಗಳೆಲ್ಲ ಸಮುದ್ರಗುಪ್ತನ ದಿಗ್ವಿಜಯದ ಅಂಶಗಳೇ. ತನ್ನ ಪ್ರಭುವಿನ ದಿಗ್ವಿಜಯ ಯಾತ್ರೆಯನ್ನೇ ಪರ್ಯಾಯವಾಗಿ ರಘು ಮಹಾರಾಜನ ದಿಗ್ವಿಜಯವಾಗಿ ಕವಿ ವರ್ಣಿಸಿದ್ದಾನೆ. ಈ ಸಮುದ್ರಗುಪ್ತನ ಮಗನೇ ಚಂದ್ರಗುಪ್ತವಿಕ್ರಮಾದಿತ್ಯ, ಈತನ ಮಗನೇ ಕುಮಾರಗುಪ್ತ. ಕುಮಾರ ಗುಪ್ತನ ಜನನದ ಜ್ಞಾಪಕವಾಗಿಯೇ ಕಾಳಿದಾಸನ 'ಕುಮಾರಸಂಭವ' ಗ್ರಂಥರಚನೆ ಇವರೆಲ್ಲರಿಗೆ ಶರತ್ ಸಂಗ್ರಾಮಸಮಯವೆನಿಸಿತ್ತು.

ಈ ಕಾಲದಿಂದಲೂ ಮಹಾನವಮಿ ಹಬ್ಬದ ಆಚರಣೆ ಭಾರತೀಯರಲ್ಲಿತ್ತೆಂದು ಗುರುತಿಸಬಹುದು. ಶರತ್ಕಾಲ ಪ್ರಾರಂಭವಾದಂತೆ ಒಂಬತ್ತು ದಿನಗಳು ಶಕ್ತಿಮಾತೆಯರೆಂದು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಸೌಭಾಗ್ಯಲಕ್ಷ್ಮಿ, ಸರಸ್ವತಿ, ಬಹ್ವೃಚ, ತ್ರಿಪುರಾತಾಪಿನಿ, ದೇವಿ, ತ್ರಿಪುರಭಾವನಾ, ತಾರಸಾರ—ಮೊದಲಾದವರ ಉಪಾಸನೆ ಮಾಡುತ್ತಿದ್ದರು.

'ಮಹಾಲಕ್ಷ್ಮೀಶ್ಚ ವಿದ್ಮಹೇ' । 'ಸರ್ವಸಿದ್ಧಿಶ್ಚ ಧೀಮಹಿ'
ತನ್ನೋದೇವೀ ಪ್ರಚೋದಯಾತ್ ॥

—ಎಂದು ಜಪಿಸುವುದು ಮಹಾಲಕ್ಷ್ಮಿಯ ಒಲುಮೆಗೇ ಆಗಿದೆ. ರಾಜರಿಗೆ ಐಶ್ವರ್ಯವಿಲ್ಲದಿದ್ದರೆ ಏನು ಮಾಡಲು ಸಾಧ್ಯ. ಅನಂತರ ದುರ್ಗರಕ್ಷಕಿಯೆನಿಸಿದ ಭಯಂಕರ ಶಕ್ತಿಯನ್ನೀಯುವ ದುರ್ಗಾದೇವಿಯ ಉಪಾಸನೆ. **'ದುರ್ಗಾಸಂತ್ರಾಯತೇಯಸ್ಮಾತ್ ತಸ್ಮಾತ್ ದುರ್ಗೇತಿಕಥ್ಯತೇ'** ಎಂದು ಹೇಳುತ್ತ ಇವಳ ಶಕ್ತಿಯನ್ನು ಪಡೆಯುವುದು. ಕೊನೆಯದಾಗಿ ಸರಸ್ವತೀದೇವಿಯ ಕೃಪೆಯಿಲ್ಲದಿದ್ದರೆ ಹೇಗೆಸಾಧ್ಯ?

ಯಾ ಪ್ರತ್ಯಗ್ ದೃಷ್ಟಿಭಿಃ ದೇವೈಃ ಯಾಜ್ಯಮಾನಾನುಭೂಯತೇ ॥
ವ್ಯಾಪಿನೀ ಜ್ಞಪ್ತಿರೂಪೈಕಾ ಸಾ ಮಾಂ ಪಾತು ಸರಸ್ವತೀ ॥

ಹೀಗೆ ಈ ದೇವಿಯನ್ನು ಉಪಾಸನೆಮಾಡಿ ತಮ್ಮೊಳಗೆ ಬೆಳಗುತ್ತಿರುವ ಅಖಂಡ ಜ್ಞಾನಪ್ರಕಾಶವನ್ನು ಉದ್ದೀಪನಗೊಳಿಸಿಕೊಳ್ಳುತ್ತಾರೆ. ಶರನ್ನವರಾತ್ರಿಯ ಏಳನೆಯ ದಿನ ಸರಸ್ವತಿಯ ಉಪಾಸನೆಯೂ, ಎಂಟನೆಯ ದಿನ ದುರ್ಗೆಯ ಉಪಾಸನೆಯೂ ಮುಖ್ಯವಾಗಿ ಈಗ ಉಳಿದಿವೆ. ಒಂಬತ್ತನೆಯ ದಿನ ಸಮಗ್ರ ಆಯುಧಗಳ ಪೂಜೆ ಪ್ರದರ್ಶನ. ಹತ್ತನೆಯ ದಿನ ವಿಜಯಯಾತ್ರೆಯ ಸಮರಭೇರಿ. ಈ ಕಾವ್ಯಗಳೆಲ್ಲ ಪ್ರಾಚೀನ ಭಾರತೀಯರ ಅತ್ಯುತ್ಸಾಹದ ದಿನಗಳೇ ಎನಿಸಿದ್ದವು. ಈ ಎಲ್ಲ ಕಾರಣಗಳಿಂದಾಗಿ '**ಮಹಾನವಮಿ**'ಯ ಆಚರಣೆ ಭಾರತೀಯರೆಲ್ಲರ ಆರ್ಷೇಯಕಾಲದ ಆಚರಣೆಯೆಂದು ಹೇಳಬಹುದು.

ಈ ಹಬ್ಬದ ಆಚರಣೆ ಪರಾಕಾಷ್ಠ ಸ್ಥಿತಿಯನ್ನೇರಿದುದನ್ನು ವಿಜಯನಗರದ ಅರಸರು ಅವರ ನಂತರ ಮೈಸೂರರಸರಲ್ಲಿ ಕಾಣುತ್ತೇವೆ. ಕರ್ನಾಟಕದಲ್ಲಿ ಚಾಲುಕ್ಯ ಚಕ್ರವರ್ತಿಗಳ ಕಾಲದಲ್ಲಿಯೂ ಇದೊಂದು ಅತ್ಯಂತ ಉತ್ಸಾಹಜನಕ ಸಾಮಾಜಿಕ ಹಬ್ಬವಾಗಿತ್ತೆಂಬುದಕ್ಕೆ ಬಸವಣ್ಣನವರ ವಚನದಲ್ಲಿ ಬರುವ "..........ಮರಣವೇ—ಮಹಾನವಮಿ" —ಎಂಬ ಮಾತಿನಿಂದ ಗುರುತಿಸಬಹುದಾಗಿದೆ. ಮನು ಮಾಂಧಾತಸಮಾನರಾದ ಕನ್ನಡನಾಡಿನ ದೊಡ್ಡದೊಡ್ಡ ಚಕ್ರವರ್ತಿಗಳು ಸಮರಪ್ರಸ್ಥಾನಭೇರಿಯನ್ನು ಹೊಡೆಯಿಸುತ್ತಿದ್ದುದು 'ಶರನ್ನವರಾತ್ರಿ' ಗಳಲ್ಲಿ ಶಕ್ತಿಯ ಆರಾಧನೆ ಮಾಡಿದ ಮರುದಿನದ ವಿಜಯದಶಮಿಯ ದಿನವೇ ಎಂಬುದು ತಿಳಿದು ಬರುತ್ತಿದೆ.

ವಿಜಯನಗರದ ಚಕ್ರವರ್ತಿಗಳು ಆಚರಿಸುತ್ತಿದ್ದ ಮಹಾನವಮಿಯ ಭವ್ಯ ಪರಂಪರೆ ಚರಿತ್ರೆಯ ಪುಟಗಳಲ್ಲಿ ಉಳಿದುಬಂದಿದೆ. ಈ ಚಕ್ರವರ್ತಿಗಳು ಈ ಹಬ್ಬಕ್ಕೊಂದು ರಾಷ್ಟ್ರೀಯ ಸ್ವರೂಪ ಕೊಟ್ಟರೆನ್ನಬಹುದು. ಸಾಮ್ರಾಜ್ಯದ ಜನತೆಯನ್ನೆಲ್ಲ ಒಟ್ಟುಗೂಡಿಸಿ, ಅಜ್ಞಾನದ ನಿದ್ರೆಯಿಂದ ಅವರನ್ನು ಎಚ್ಚರಿಸಿ, ಸ್ವಾಭಿಮಾನ ಸ್ವದೇಶಾಭಿಮಾನಗಳನ್ನು ಅವರಲ್ಲಿ ತುಂಬಿ ತಾಯ್ನಾಡ ರಕ್ಷಣೆಗೆ ಅವರನ್ನು ಹುರಿದುಂಬಿಸಬೇಕಾಗಿತ್ತು. ಏಕೆಂದರೆ ವಿಜಯನಗರ ಸಾಮ್ರಾಜ್ಯ ಹುಟ್ಟಿದುದು ಹಿಂದೂ ಧರ್ಮ, ಸಂಸ್ಕೃತಿ, ಸಾಹಿತ್ಯ, ಸಂಸ್ಕೃತಿಯ ರಕ್ಷಣೆಗೆಂದೇ ಸಂದಿಗ್ಧ ಪರಿಸ್ಥಿತಿಯಲ್ಲಿ ಹುಟ್ಟಿದ ದಕ್ಷಿಣಭಾರತದ ದೊಡ್ಡ ಚಕ್ರಾಧಿಪತ್ಯವೆನಿಸಿತ್ತು. ಅತ್ಯದ್ಭುತ ಪರಾಕ್ರಮಶಾಲಿಯೆನಿಸಿದ್ದ ಪ್ರೌಢದೇವರಾಯ, ನರಪತಿ ಕೃಷ್ಣದೇವರಾಯರ ಕಾಲಗಳಲ್ಲಿ ಆಚರಿಸುತ್ತಿದ್ದ ಮಹಾನವಮಿಯ ಹಬ್ಬದ ವೈಭವವನ್ನು ಅಂದು ಕಣ್ಣಾರಕಂಡು ಬರೆದಿಟ್ಟ ವಿದೇಶೀಯರ ಬರವಣಿಗೆಗಳಿಂದ ತಿಳಿಯಬಹುದಾಗಿದೆ.

'ಮಹಾನವಮಿ' ಹಬ್ಬಕ್ಕೆಂದೇ ಕೃಷ್ಣದೇವರಾಯನಿಂದ ಕ್ರಿ.ಶ. 1513 ರಲ್ಲಿ ಕಟ್ಟಲ್ಪಟ್ಟ ದಿವ್ಯಭವ್ಯವಾದ 'ಮಹಾನವಮಿ ದಿಬ್ಬ, ವೆಂದು ಈಗ ನೋಡ ಸಿಗುವ

ವೇದಿಕೆಯೇ ಇದಕ್ಕೊಂದು ಜ್ವಲಂತ ನಿದರ್ಶನ. ಪೇಜ್ ಎಂಬ ವಿದೇಶೀ ಪ್ರವಾಸಿಯು ಈ ದಿಬ್ಬವನ್ನೇ ವಿಜಯಭವನವೆಂದು ಕರೆದಿದ್ದಾನೆ. ಚಕ್ರವರ್ತಿಯು ಈ ದಿಬ್ಬದ ಮೇಲೆ ಅಧೀನರಾಜರು, ಸಾಮಂತರು, ಉಪರಾಜರು, ಮಂಡಲೇಶ್ವರರುಗಳೊಡನೆ ಚಿನ್ನದಿಂದ ಮಾಡಿದ ಛತ್ರಿಯ ಅಡಿಯಲ್ಲಿ ಕುಳಿತು ಕುಸ್ತಿ, ಆನೆಕಾಳಗ ಬಿಲ್ಗಾರತನ, ಕ್ರೀಡೆ, ನಾಟ್ಯ, ಗಾನ, ಇತರ ಶೌರ್ಯವೀರ್ಯ ಪ್ರತಾಪ ಪ್ರಚೋದಕ ಪ್ರದರ್ಶನಗಳನ್ನು ನೋಡುತ್ತಿದ್ದನು. 22 ಅಡಿ ಎತ್ತರ, 40 ಅಡಿ ಚದರದ ವಿಸ್ತಾರವಾದ ಈ ದಿವ್ಯ ಮಹಾನವಮಿ ದಿಬ್ಬ ರಮಣೀಯತೆಯಲ್ಲಿ ವೈಶಿಷ್ಟ್ಯದಲ್ಲಿ ಅನಾದೃಶವಾದುದು.

ಪ್ರೌಢದೇವರಾಯನ ಕಾಲದಲ್ಲಿ ಆಚರಿಸುತ್ತಿದ್ದ ಮಹಾನವಮಿ ಹಬ್ಬದ ಬಗೆಗೆ ಪರ್ಷಿಯಾ ದೇಶದ ರಾಯಭಾರಿಯಾಗಿ ವಿಜಯನಗರಕ್ಕೆ ಬಂದಿದ್ದ ಅಬ್ದುಲ್ ರಜಾಕನು "ವಿಜಯನಗರದ ರಾಜರು ತಮ್ಮ ಗೌರವ ಪ್ರತಿಷ್ಠೆ ಅಧಿಕಾರ ದರ್ಪ ಮತ್ತು ವೈಭವ ಪ್ರದರ್ಶನಕ್ಕಾಗಿ ಪ್ರತಿ ವರ್ಷವು ಮಹಾನವಮಿ ಹಬ್ಬವನ್ನು ಆಚರಿಸುತ್ತಾರೆ. ಈಹಬ್ಬ ನಿಜವಾಯೂ ಚಕ್ರವರ್ತಿಗೆ ಯೋಗ್ಯವಾದ ಹಬ್ಬವೇಸರಿ." ಎಂದು ಉದ್ಗಾರ ತೆಗೆದು ಆಗಿನ ಆಚರಣೆಯ ರೀತಿಯನ್ನು ವಿವರಿಸಿದ್ದಾನೆ ಅದರ ಮುಖ್ಯಾಂಶ ಇಷ್ಟು;

"ಮೂರು ತಿಂಗಳು ಪ್ರಯಾಣ ಮಾಡುವಷ್ಟು ವಿಸ್ತಾರವಾದ ಸಾಮ್ರಾಜ್ಯದ ಎಲ್ಲ ಕಡೆಗಳಿಂದಲೂ ಮಾಂಡಲಿಕರು, ಸರದಾರರು, ಮುಖ್ಯಸ್ಥರೂ ರಾಜಧಾನಿಗೆ ಸಾವಿರಾರು ಅಲಂಕೃತ ಆನೆ ಸಮೇತವಾಗಿ ಬರುತ್ತಾರೆ. ಅರಮನೆಯಲ್ಲಿ ಸೇನಾಪತಿಗಳೂ ಪ್ರಮುಖರೂ, ಪಂಡಿತರಾದ ಬ್ರಾಹ್ಮಣರೂ ಸೇರುತ್ತಾರೆ. ಅರಮನೆಯ ಮುಂಭಾಗದ ಅಲಂಕಾರಗೊಂಡ ಮೈದಾನದಲ್ಲಿ ಅಸಂಖ್ಯಾತ ಆನೆಗಳ ಸಮೂಹ ನಡೆಯುವುದು. ಆ ಮೈದಾನದಲ್ಲಿ ಮೂರುನಾಲ್ಕು ಅಂತಸ್ತಿನ ಅನೇಕ ರಂಗಮಂಟಪಗಳು ಸ್ಥಾಪಿತವಾಗಿರುತ್ತವೆ. ಆ ಪ್ರದೇಶದಲ್ಲಿ ಒಂಬತ್ತು ಭವ್ಯಾಲಂಕೃತ ಮಂಟಪಗಳು ಸಿದ್ಧವಾಗಿರುತ್ತವೆ. ಒಂಬತ್ತನೇ ಮಂಟಪದಲ್ಲಿ ಚಕ್ರವರ್ತಿಯ ಸಿಂಹಾಸನವಿರುತ್ತದೆ. ಅಲ್ಲಿ ಕುಳಿತು ಚಕ್ರವರ್ತಿ ಮತ್ತು ಇತರ ರಾಜಮಹಾರಾಜರು, ಪಂಡಿತರು ಅತಿಥಿಗಳು ಮುಂಭಾಗದಲ್ಲಿ ನಡೆಯುವ ಅನೇಕ ದೃಶ್ಯಗಳನ್ನು ನೋಡಬಹುದಾಗಿತ್ತು. ಹೀಗೆ ಒಂಬತ್ತು ದಿನಗಳು ವೈಭವೋಪೇತವಾಗಿ ನವರಾತ್ರಿ ಮುಗಿಯುತ್ತಿತ್ತು. ಕಲಾವಿದರೆಲ್ಲರಿಗೆ ಭೂರಿಬಹುಮಾನ ವಸ್ತ್ರಗಳ ಉಡುಗೊರೆ ಕೊಡಲ್ಪಡುತ್ತಿದ್ದವು." ಇತ್ಯಾದಿ.

ವಿಜಯನಗರದ ಇನ್ನೊಬ್ಬ ಘನ ಚಕ್ರವರ್ತಿ ಕೃಷ್ಣದೇವರಾಯನ ಕಾಲದಲ್ಲಿ ಬಂದಿದ್ದ 'ಪೇಜ್'ಎಂಬ ವಿದೇಶಿಯನು ತಾನೇ ಕಣ್ಮುಟ್ಟಿಕಂಡದ್ದನ್ನು ಬರೆದಿಟ್ಟಿರುವುದು ಹೀಗೆ:

"ಆಶ್ವೀಜ ಶುದ್ಧ ಪ್ರತಿಪದೆಯಿಂದ ಒಂಬತ್ತು ದಿನಗಳು ನಿತ್ಯವೂ ಪ್ರಾತಃಕಾಲ ಚಕ್ರವರ್ತಿಯು ಬಯಲಿನಲ್ಲಿರುವ ದೇವಸ್ಥಾನಕ್ಕೆ ಹೋಗಿ ಮೊದಲು ದೇವರ ಪೂಜೆ ಮಾಡುತ್ತಾನೆ. ಅನಂತರ ತನ್ನ ಸಮಸ್ತ ಪರಿವಾರದ ಸಮಕ್ಷ ಹನ್ನೊಂದು ಆನೆ, ನಾಲ್ಕು ಬಿಳಿಯ ಕುದುರೆಗಳನ್ನು ಗುಲಾಬಿ ಹೂಗಳಿಂದ ಪೂಜಿಸುತ್ತಾನೆ. ಆಮೇಲೆ ಬಲಿಕೊಡುವುದೇ ಮೊದಲಾದ ಕಾರ್ಯಗಳನ್ನು ಮುಗಿಸಿ, ಅರಮನೆಯೊಳಕ್ಕೆ ಹೋಗುವನು. ಮಧ್ಯಾಹ್ನ ಮೂರು ಘಂಟೆಯ ನಂತರ ಕಲಾಪ್ರದರ್ಶನವನ್ನು ನೋಡಲು ಬರುತ್ತಾನೆ. ಆಗ ವಿವಿಧ ಕಲಾಪ್ರದರ್ಶನಗಳು, ಶಕ್ತಿಸಾಹಸಗಳು' ಶೌರ್ಯವೀರಾದಿಗಳ ಪಂದ್ಯಾಟಗಳು, ನೃತ್ಯ, ಸಂಗೀತ, ಜಿಲ್ಲಾ ರತನಗಳೇ ಮೊದಲಾದವು ನಡೆಯುತ್ತವೆ. ಸಂಜೆಯುವರೆಗೆ ಈ ದೃಶ್ಯಗಳನ್ನು ನೋಡಿದ ಮೇಲೆ ರಾತ್ರಿಯನ್ನೇ ಹಗಲಾಗಿಸುವಂತಹ ಅನೇಕ ಪಂಜಿನ ಬೆಳಕಿನಲ್ಲಿ ವಿವಿಧ ರೀತಿಯ ಆಟಪಾಟಗಳೂ, ಮಂತ್ರತಂತ್ರಗಳೂ, ಕುದುರೆ ಗೊಂಬೆ ಕುಣಿತ, ಮನುಷ್ಯರನ್ನು ಮೀನಿನಂತೆ ಬಲೆಯಲ್ಲಿ ಹಿಡಿಯುವ ಆಟ, ಕೊನೆಯಲ್ಲಿ ಬಾಣ ಬಿರುಸುಗಳನ್ನು ಸುಡುವಿಕೆ- ಇವೆಲ್ಲ ನಭೂತೋ ನ ಭವಿಷ್ಯತಿ, ಎನ್ನುವಂತೆ ನಡೆದು ಹೋಗುವುದನ್ನು ನೋಡುತ್ತಾನೆ. "ಹತ್ತನೆಯ ದಿನ '**ವಿಜಯ ದಶಮಿ**' ಎಂದು ಕರೆಯುವ ಹಬ್ಬದ ಆಚರಣೆ. ಆ ದಿನ ಚಕ್ರವರ್ತಿ ತನ್ನ ಸಮಗ್ರ ಸೈನ್ಯದ ಪರಿಶೀಲನೆ ಮಾಡಿ ಊರ ಹೊರ ಭಾಗದಲ್ಲಿ ಹಾಕಿದ ಭವ್ಯ ಮಂಟಪದಲ್ಲಿ ದೇವತಾ ಪ್ರತಿಷ್ಠೆ ಮಾಡಿ ಚತುರಂಗ ಬಲಸಮೇತವಾಗಿ 'ಸೀಮೋಲ್ಲಂಘನ" ಕ್ರಿಯೆಯನ್ನು ಆಚರಿಸಿ, ಹಿಂದಿರುಗುತ್ತಾನೆ. ಇಂಥ ನೋಟ ಪ್ರಪಂಚದಲ್ಲಿ ಎಲ್ಲಿಯೂ ನೋಡಸಿಗುವುದಿಲ್ಲ"ವೆಂದು ಪೇಜನ ಅಭಿಪ್ರಾಯ ಆ ಕಾಲದಲ್ಲಿ ರಾಜನಲ್ಲಿ ದಶಲಕ್ಷ ಕಾದಾಟಕೆ ಸಿದ್ಧವಾಗಿದ್ದ ಸೈನ್ಯವಿತ್ತೆಂದು ಅವನ ಹೇಳಿಕೆ. ವಿಜಯ ದಶಮಿಯ ಈ ವೈಭವವನ್ನೆಲ್ಲ ಕುದುರೆಯ ಮೇಲೆ ಕುಳಿತು ನೋಡುತ್ತಿದ್ದ ಪೇಜನಿಗೆ ತಲೆತಿರುಗಿ ಕುದುರೆಯ ಮೇಲಿಂದ ಬೀಳುವಂತಾಗಿತ್ತಂತೆ. ಸಮಸ್ತ ಪ್ರಪಂಚವೇ ಇಲ್ಲಿ ನೆರೆದಿರುವುದೋ ಎಂಬ ಭ್ರಮೆಯುಂಟಾಯಿತಂತೆ.

ವಿಜಯನಗರವು 15೬5ರಲ್ಲಿ ರಕ್ಕಸತಂಗಡಿ ಯುದ್ಧದಲ್ಲಿ ಸೋಲನ್ನನುಭವಿಸಿದ ನಂತರ ಅದರ ವೈಭವವು ಕಡಿಮೆಯಾಗಿ ಪೆನುಗೊಂಡೆ ಚಂದ್ರಗಿರಿ ಶ್ರೀರಂಗ ಪಟ್ಟಣಗಳಲ್ಲಿ ಅದರ ರಾಜಸತ್ತೆ ಪ್ರಾರಂಭವಾಯಿತು. ಅಲ್ಲಲ್ಲಿ ಆಗ ನವರಾತ್ರಿ ಉತ್ಸವಗಳು ನಡೆಯ ತೊಡಗಿದವು. ಆ ರತ್ನ ಸಿಂಹಾಸನವು ಮಾತ್ರ ಶ್ರೀರಂಗ ಪಟ್ಟಣದಲ್ಲಿ ಪ್ರತಿಷ್ಠಿತವಾಗಿತ್ತು. ಶ್ರೀರಂಗಪಟ್ಟಣವನ್ನು ಮೈಸೂರಿನ ರಾಜವಡೆಯರು ೧೯೧೦ ನೆಯ ಇಸ್ವಿಯಲ್ಲಿ ವಶಪಡಿಸಿಕೊಂಡ ಮೇಲೆ ಮೈಸೂರರಸ ವಿಜಯನಗರದ ರತ್ನ ಸಿಂಹಾಸನದ ಮೇಲೆ ಕುಳಿತು ಮಹಾನವಮಿ ಉತ್ಸವಗಳನ್ನು ಶ್ರೀರಂಗಪಟ್ಟಣದಲ್ಲಿ ನಡೆಸ ತೊಡಗಿದರು. ಅನಂತರ ರಾಜಧಾನಿಯನ್ನು ಪುನಃ ಮೈಸೂರಿಗೆ 1799 ರಲ್ಲಿ ಬದಲಾಯಿಸಿದ ನಂತರ ಮೈಸೂರಲ್ಲಿ ಈ ಉತ್ಸವಗಳು ನಡೆಯತೊಡಗಿದವು ಮೈಸೂ

ರಿನಲ್ಲಿ ಆಚರಿಸಲ್ಪಡುತ್ತಿದ್ದ ನವರಾತ್ರಿಯ ಉತ್ಸವ ಜಗತ್ಪ್ರಸಿದ್ಧವಾಗಿ ಹೋಯಿತು. ಆಧುನಿಕ ಯುಗದಲ್ಲಿ ವಿದ್ಯುದ್ದೀಪಾಲಂಕಾರವೇ ಮೊದಲಾದ ವೈಜ್ಞಾನಿಕ ಸಾಧನೆ ಸಲಕರಣೆಗಳಿಂದ ಮೈಸೂರರಸರು 19 ಮತ್ತು 20 ನೆಯ ಶತಮಾನದ ಪೂರ್ವಾರ್ಧದಲ್ಲಿ ನಡೆಸುತ್ತಿದ್ದ ಈ ಹಬ್ಬವನ್ನು ನೋಡಿ ವಿದೇಶೀಯರೂ ಮೂಕವಿಸ್ಮಿತರಾದರೆಂಬುದು ಬೇರೆ ವಿಷಯ, ರಾಜಸತ್ತೆಯು ಮಾಯವಾಗಿರುವ ಈಗ ವಿಶ್ವವಿಖ್ಯಾತ ಮೈಸೂರು ದಸರಾ ಮಹೋತ್ಸವವನ್ನು ಕೈಬಿಡದೆ ಮೈಸೂರುಮಹಾರಾಜರ ಆರಾಧ್ಯ ದೇವತೆಯಾದ ಚಾಮುಂಡಿಯ ವಿಗ್ರಹವನ್ನು ಮೆರವಣಿಗೆ ಮಾಡುವುದರ ಮೂಲಕ ಉಳಿಸಿಕೊಂಡು ಬಂದರೂ ರಾಜರ ಕಾಲದ ವೈಭವವನ್ನು ಕಾಣಲಾಗುವುದಿಲ್ಲ.

ಶ್ರೀರಂಗಪಟ್ಟಣದಲ್ಲಿ ರಣಧುರೀಣ್, ಪ್ರತಾಪಶಾಲಿ, ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಮಹಾನವಮಿ ಒಡ್ಡೋಲಗ ನಡೆಯುತ್ತಿದ್ದುದನ್ನು ಸಮಕಾಲೀನ ಸಾಂಗತ್ಯಕವಿ ಗೋವಿಂದ ವೈದ್ಯನೆಂಬುವನು ತನ್ನ "**ಕಂಠೀರವ ನರಸರಾಜೇಂದ್ರ ವಿಜಯು**" ವೆಂಬ ಗ್ರಂಥದಲ್ಲಿ ಮನಂಬುಗುವಂತೆ ಚಿತ್ರಿಸಿದ್ದಾನೆ. ಆ ಬಗೆಗೆ ಸಂಗ್ರಹವಾಗಿ ಹೀಗೆ ಹೇಳಬಹುದುಃ

ಆಶ್ವೀಜ ಶುದ್ಧ ಪ್ರತಿಪದೆಯ ದಿನ ಓಲಗ ಶಾಲೆಯಲ್ಲಿ ಪುಣ್ಯಾರ್ಚನೆ, ಹೋಮದಿಗಳನ್ನು ಮಾಡಿಸಿ, ಗಜಶಾಲೆ, ಆಯುಧಾಗಾರ ಮೊದಲಾದವುಗಳಲ್ಲಿ ಹೋಮಾರ್ಚನೆ, ಬೆಟ್ಟದಲ್ಲಿರುವ ಚಾಮುಂಡಾಂಬಿಕೆಯ ಪೂಜೆಗಳು ಯಥಾ ಸಾಂಗವಾಗಿ ನಡೆಯುತ್ತಿದ್ದವು. ಪ್ರತಿದಿನ ಒಡ್ಡೋಲಗ ನಡೆಯುತ್ತಿತು. ರಾಜವರ್ಗ, ರಾಜಬಂಧುಗಳು, ಪಾಳಿಪಟ್ಟುಗಳ ನಾಯಕರು, ಮನ್ನೆಯರು, ಪಂಡಿತರು ಸಭೆಗೆ ಬರುತ್ತಿದ್ದರು.

(ಸಾಂಗತ್ಯ)ಃ

ಬಿರುದಿನ ರಾಯ ರಾವುತ ಮಾಂಡಳಿಕರು!
ಕರಣಿಕ ರಾಪ್ತ ಮಂತ್ರಿಗಳು!
ಪರಿಪರಿಯಾಭರಣದ ಬಲು ಸುಭಟರ!
ನೆರವಿಯೈತಂದು ದೇವೇಳ್ವೆ॥

ಪುರಜನ ಪರಿಜನ ನಾನಾದೇಶದಜನ!
ನೆರವಿಯ ಜನ ಸಿಂಗರಿಸಿ!
ನರಸೇಂದ್ರನ ಮಹಾನವಮಿ ಯೋಲಗದ ಸಾ-!
ದರಿಯುವ ನೋಡಲೈದಿದರು॥

ಹೀಗೆ ದರಬಾರಿನಲ್ಲಿ ಸೇರಿದ ಜನವೆಲ್ಲ ಅನೇಕ ಬಗೆಯ ಕಲಾಪ್ರದರ್ಶನಗಳನ್ನು ನೋಡುತ್ತಿದ್ದರು. ಕವಿ ತನ್ನಗ್ರಂಥದ ಒಂದು ಅಧ್ಯಾಯದ 133 ಪದ್ಯಗಳಲ್ಲಿ ವರ್ಣಿಸಿರುವ ರೀತಿಯನ್ನು ನೋಡಿದರೆ, ವಿಜಯನಗರದ ರಾಜವೈಭವವನ್ನು ಶ್ರೀರಂಗ

ಪಟ್ಟಣದ ಈ ರಾಜದಲ್ಲಿ ಕಾಣಲಾಗದಿದ್ದರೂ, ಸಣ್ಣ ಪ್ರಮಾಣದಲ್ಲಿ ಎಲ್ಲ ಕಾರ್ಯಕ್ರಮಗಳೂ ಜರಗುತ್ತಿದ್ದವು ಈ ಕಾರಣದಿಂದಲೇ ವಿಜಯನಗರದ ಮಹಾನವಮಿಯ ಉತ್ಸವದ ಉತ್ತರಾಧಿಕಾರಿಗಳು ಮೈಸೂರರಸರೆಂದು ಹೇಳುವುದು ವಾಡಿಕೆ, ಒಡ್ಡೋಲಗದಲ್ಲಿ ಆಗ ಮೃದಂಗವಾದನ, ಗಾಯನತಾಳಮದ್ದಲೆ, ನಾಟ್ಯ, ನೃತ್ಯ, ಗಿಳಿಯ ಕಟ್ಟಳೆ, ಸೋಗೆನವಿಲಾಟ, ಹಂಸೆಯರಳೆಗಳಗತಿ, ಇಂದ್ರಜಾಲ, ಬೈರೂಪದಾಟ,ಹಾಸ್ಯ ದಶಾವತಾರ ನಾಟಕ, ಗಾನ, ಕವಿಗಮಕಿ ವಾದಿವಾಗ್ಮಿಗಳ ಪಾಂಡಿತ್ಯ ಪ್ರದರ್ಶನ, ಭಾರತ ರಾಮಾಯಣಾದಿ ಗ್ರಂಥ ಪಠಣ –ಮೊದಲಾದ ಕಾರ್ಯಕ್ರಮಗಳು ನೆರವೇರುತ್ತಿದ್ದುವಂತೆ. ಕೊನೆಯದಿನ ಬಾಣಬಿರುಸುಗಳ ಸಂಭ್ರಮ ಅತ್ಯಂತ ಅದ್ಭುತವಾಗಿರುತ್ತಿತ್ತಂತೆ.

ಇಂತಪ್ಪೋಲಗಮೆಂಟು ದಿವಸ ಪರಿ-1
ಯಂತರ ಸಕಲ ಸಂಭ್ರಮದೆ
ಸಂತೋಷವ ಸರ್ವ ಜನಕೆ ಬೀರುತಲ-1
ತ್ಯಂತ ಸೌಖ್ಯದೊಳೊಪ್ಪಿದುದು ॥

–ಹೀಗೆ ಎಂಟು ದಿನಗಳು ರಾಜ್ಯದ ಹೆಸರಾಂತ ವಿವಿಧಕಲಾ ಪರಿಣತರ ಕಲಾಪ್ರದರ್ಶನಗಳು ನಡೆದು ಒಂಬತ್ತನೆಯ ದಿನ ಆಯುಧ ಪೂಜೆ, ಹತ್ತನೆಯ ದಿನ ವಿಜಯಯಾತ್ರೆಯ ಸಂಕೇತವಾಗಿ 'ವಿಜಯ ದಶಮಿ' ಯ ಸೀಮೋಲ್ಲಂಘನದ ಉತ್ಸವ ನಡೆದು ಶಮೀಪೂಜೆ ಮಾಡಿ ಶಮೀದಲಗಳನ್ನು 'ಬಂಗಾರ' ವೆನ್ನುತ್ತ ಪರಸ್ಪರ ಹಂಚುತ್ತಾ ಭಾವೈಕ್ಯ ಸಾಧಿಸುತ್ತಿದ್ದರು. ಶಕ್ತಿ ಸಂಚಯನಗೊಳಿಸಿಕೊಳ್ಳುತ್ತ ಪ್ರಜಾವರ್ಗರಕ್ಷಣೆಯಲ್ಲಿ ರಾಜರುಗಳು ಸದಾ ಜಾಗೃತರಾಗುತ್ತಿದ್ದರು. ಪ್ರಜೆಗಳೂ ರಾಜರಲ್ಲಿ ನಿಷ್ಠೆ ತೋರಿಸುತ್ತಿದ್ದರು.

ಕರ್ನಾಟಕದ ವೈಶಿಷ್ಟ್ಯಪೂರ್ಣವಾದ ಈ ಮಹಾನವಮಿ ಹಬ್ಬದ ಪರಂಪರೆ ಎಲ್ಲ ಕಡೆಗಳಲ್ಲೂ ವಿಜೃಂಭಣೆಯಿಂದ ನಡೆದು ಎಲ್ಲ ದೈವದವರು ವೃತ್ತಿಬಾಂಧವರು ಜಾತಿಮತ ಕೋಮುಗಳ ತಾರತಮ್ಯವಿಲ್ಲದೆ ಹತ್ತು ದಿನ ಸಂತೋಷವಾಗಿ ಆಚರಿಸಿ ಭಾವೈಕ್ಯ ಸಾಧಿಸಿಕೊಂಡು ಪರಸ್ಪರ ಪೂರಕವಾಗಿ ಬಾಳಬೇಕೆಂಬ ಸದಿಚ್ಛೆಯಿಂದ ಇದನ್ನು 'ನಾಡಹಬ್ಬ' ವೆಂದು ಕರೆದು ಈ ಶತಮಾನದ ಪೂರ್ವಾರ್ಧವಲ್ಲಿ 1925-26 ರಿಂದ ದಿವಂಗತ ಬೇಂದ್ರೆ, ಬೆಟಗೇರಿ ಕೃಷ್ಣಶರ್ಮಾ, ಬುರ್ಲಿಬಿಂದು ಮಾಧವ ಮೊದಲಾದವರು ಪ್ರಯತ್ನಿಸಿದರು. ಅವರ ಪ್ರಯತ್ನ ಯಶಸ್ವಿಯಾಗಿ ಎಲ್ಲ ಕಡೆಗೂ ನಾಡ ಹಬ್ಬದ ಕಾರ್ಯಕ್ರಮಗಳು ನಡೆಯತೊಡಗಿದವು. ನಾಡಹಬ್ಬದ ಮುಖ್ಯ ಉದ್ದೇಶ ಕರ್ನಾಟಕತ್ವದ ಪೋಷಣೆ, ಅಖಂಡ ಕರ್ನಾಟಕ ಸಾಧನೆಯ ದೃಷ್ಟಿ. ಕರ್ನಾಟಕದ ಉಜ್ವಲ ಪರಂಪರೆಯ ಅರಿವನ್ನು ಜನಕ್ಕೆ ಮಾಡಿಕೊಡುವುದೇ

ಆಗಿತ್ತು. ಸರ್ವಾಂಗ ಸುಂದರ ಕರ್ನಾಟಕವನ್ನು ಕಟ್ಟಿ ಭಾರತದ ಸಮಗ್ರ ಅಭ್ಯುದಯಕ್ಕೆ ತಮ್ಮ ಪಾಲಿನ ಕಾಣಿಕೆ ಸಮರ್ಪಿಸುವುದೇ ಆಗಿತ್ತು. ಇತ್ತ ಮೈಸೂರು ಅರಮನೆಯವರೂ ತಮ್ಮ ಸಂಪ್ರದಾಯಕವಾದ ಮಹಾನವಮಿ ಮಹೋತ್ಸವವನ್ನು 'ದಸರಾ' ಎಂಬ ಹೆಸರಿನಿಂದ ನಡೆಸುತ್ತಾ ಬಂದು ವಿಶ್ವವಿಖ್ಯಾತಗೊಳಿಸಿದರು. 'ಶ್ರೀ ಜಯಚಾಮ ರಾಜ ಒಡೆಯರು' ಮೈಸೂರಿನ ಮಹಾರಾಜರಾಗಿರುವವರೆಗೆ ಈ ಹಬ್ಬ ಬಹು ಪ್ರಾಚೀನ ಪರಂಪರೆಯಂತೆ ನಡೆದು ಬಂತು.

ದೇಶಿ ಸಂಸ್ಥಾನಗಳೆಲ್ಲ ಸ್ವತಂತ್ರ ಭಾರತದಲ್ಲಿ ಅಸ್ತಿತ್ವ ಕಳೆದುಕೊಂಡ ಮೇಲೆ ರಾಜಸತ್ತೆಯೇ ಇಲ್ಲದಂತಾಗಿ ಈಗ ಈ ಹಬ್ಬವನ್ನು ಕರ್ನಾಟಕ ಸರಕಾರ ಮೈಸೂರಿನಲ್ಲಿಯೇ ಚಾಮುಂಡೇಶ್ವರಿ ವಿಗ್ರಹವನ್ನು ಮುಂದಿಟ್ಟುಕೊಂಡು ಆದಷ್ಟು ಶ್ರದ್ಧೆಯಿಂದ ಸಾಹಿತ್ಯ, ಕಲೆ, ಪರಂಪರೆಗಳ ಉಳವಿಗಾಗಿ ಯತ್ನಿಸುತ್ತಿದೆ. ಈ ಯತ್ನ ಎಷ್ಟು ದಿನ ನಡೆಯುವುದೋ ನೋಡಬೇಕು. ಒಂದು ಕಾಲದ ಸಂಪ್ರದಾಯಗಳು ಬದಲಾದ ಇನ್ನೊಂದು ಕಾಲದಲ್ಲಿ ಅರ್ಥಕಳೆದುಕೊಳ್ಳುವುದು ಸ್ವಾಭಾವಿಕವಾದರೂ, ಭಾವೈಕ್ಯ ದೃಷ್ಟಿಯಿಂದ ನಡೆಯಬೇಕಾದ ಅನೇಕ ಸತ್ಸಂಪ್ರದಾಯಗಳನ್ನು ನಡೆಸಿಕೊಂಡು ಬರಬೇಕಾದುದು ಅವಶ್ಯಕ. ಹಿಂದೂ ಸಮಾಜ ವೈವಿಧ್ಯಮಯವಾದುದು. ಇತ್ತೀಚಿಗೆ ಕೆಲವಾರು ಕಾರ್ಯಗಳಿಂದ ಸಮಾಜದ ಭಾವೈಕ್ಯಕ್ಕೆ ಭಂಗಬರತೊಡಗಿದೆ. ಹೀಗಾಗುವುದು ಕ್ಷೇಮಕರವಲ್ಲ. ಹಿಂದೂ ಸಮಾಜ ಎಲ್ಲ ಸಮಾಜಗಳೊಡನೆಯೂ ಭಾರತೀಯತ್ವವನ್ನು ಸಾಧಿಸಬೇಕಾದುದು ಈಗ ಅತ್ಯಾವಶ್ಯಕವಾಗಿದೆ. ಪ್ರತ್ಯೇಕತಾಮನೋಭಾವ, ದ್ವೇಷಾಸೂಯೆಗಳ ಯೋಚನೆ ಇವು ವಿನಾಶಕಾರಣಗಳು. ಸಾಮೂಹಿಕವಾಗಿ ದೈವೀಭಾವನೆಯಿಂದ ಆಚರಿಸುವ ಮಹಾನವಮಿಯಂಥ ಹಬ್ಬ ಹರಿದಿನಗಳು ಅರ್ಥವತ್ತಾಗಿ ನಡೆದಾಗ ಜನತೆಯ ಭಾವೈಕ್ಯ ಕುದುರಿ ಕ್ಷೇಮವಾದೀತು ಈ ವರ್ಷದ 'ಶರನ್ನವರಾತ್ರಿ' ಹಬ್ಬ ಕರ್ನಾಟಕಕ್ಕೆ ಭಾರತಕ್ಕೆ ಅಂಥ ಭಾವೈಕ್ಯದ ಅನುಗ್ರಹವನ್ನುಂಟುಮಾಡಲೆಂದು ಹಾರೈಸುತ್ತೇನೆ.

---

## ಮುಕ್ತಕವು

—ಆಸ್ಥಾನವಿದ್ವಾನ್ ಶ್ರೀ ಚನ್ನಬಸಪ್ಪವೀರಪ್ಪ ಕೋಟಿ

ಪಾಯಾಚ್ಛ್ರೀಮದನಾದಿ ಭಕ್ತಬಸವ ಸ್ವಾಂತಾಂಬುಜಾಂತೇ ಸ್ಫುರ-
ದ್ಧಂಸೋ ಯೋಗಿಮನೋನಿಶಾಂತ ವಿಮಲಜ್ಞಾನ ಪ್ರದೀಪೋ ವಿಭುಃ ॥
ಭಕ್ತಾದಿಸ್ಥಲಷಟ್ಕನಿರ್ಣಯಪಥಂ ಸಂಸ್ಥಾಪಯನ್ ಭೂತಲೇ ।
ಸಿದ್ಧೇಶಃ ಕರುಣಾಮಯಃ ಪರತರ ಶ್ರೀ ತೋಂಟದಾರ್ಯಾಹ್ವಯಃ ॥

# ಗಾಂಧೀಜಿ, ಹಾಗೂ ತಾಂತ್ರಿಕತೆ

—ಡಿ. ವೆಂಕಟರಾವ್, ಎಂ. ಎ.,

ನವೀನತೆಯನ್ನು ಬಯಸುವ ಜನ ಹೆಚ್ಚಾಗುತ್ತಿರುವ ಇಂದಿನ ಯುಗದಲ್ಲಿ ಆಧುನೀಕರಣ ಬಲವಾಗಿ ಬೇರೂರುತ್ತಿದೆ. ಆಧುನಿಕ ಸುಭ್ಯತೆ ಹಾಗೂ ರಾಷ್ಟ್ರದ ಪ್ರಗತಿಗೆ ತಾಂತ್ರಿಕತೆ ಅನಿವಾರ್ಯ ಎಂಬ ಭಾವನೆಯನ್ನು ಇಂದು ಸಾಮಾನ್ಯ ಮನುಷ್ಯನೂ ತಳೆದಿದ್ದಾನೆ. ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಲ್ಲಿ ತಾಂತ್ರಿಕತೆಯಿಂದಾಗುವ ಪರಿಣಾಮಗಳನ್ನು ಕಂಡುಹಿಡಿಯಲು ಇತ್ತೀಚಿಗೆ ಹಲವಾರು ಪ್ರಯತ್ನಗಳನ್ನು ಕೈಗೊಳ್ಳಲಾಗುತ್ತಿದೆ.

ದ್ವಿತೀಯ ಮಹಾಯುದ್ಧದವರೆಗೂ ಯಂತ್ರಗಳ ಬಳಕೆ ಅಷ್ಟಾಗಿರಲಿಲ್ಲ. ಆದರೆ ಯುದ್ಧಾನಂತರ ಕೈಗಾರಿಕಾ ಉತ್ಪಾದನೆಯಲ್ಲಿ ತಾಂತ್ರಿಕತೆ ಮಹತ್ವದ ಸ್ಥಾನ ಪಡೆದುಕೊಂಡಿತು. ಇದಕ್ಕೆ ಮುಖ್ಯ ಕಾರಣ ಯುದ್ಧದ ಸಮಯದಲ್ಲಿ ಉತ್ಪಾದನಾ ವಸ್ತುಗಳಿಗೆ ಅಧಿಕ ಬೇಡಿಕೆ ಉಂಟಾದುದು. ಅಲ್ಲಿಂದ ಮಾನವ ಕೈಗೊಳ್ಳುತ್ತಿದ್ದ ಕಾರ್ಯಗಳನ್ನೂ ಯಂತ್ರಗಳೇ ನಿರ್ವಹಿಸುವಂತಾಯಿತು. ಮುಂದೆ ಅನೇಕ ರಾಷ್ಟ್ರಗಳು ತಾಂತ್ರಿಕತೆಯ ಅಡಿಗಲ್ಲ ಮೇಲೆ ಭವ್ಯ ಪ್ರಗತಿಪರ, ಶ್ರೀಮಂತ ರಾಷ್ಟ್ರಗಳಾಗಿ ರೂಪುಗೊಂಡವು. ಉತ್ಪಾದನಾ ರಂಗದಲ್ಲಿ ತಾಂತ್ರಿಕತೆಯನ್ನು ಹೆಚ್ಚಾಗಿ [ಅಳವಡಿಸಿಕೊಂಡಿರುವುದರಿಂದ ಇಂದು ಅಮೇರಿಕಾ ಜಗತ್ತಿನ ಅತಿ ಮುಂದುವರಿದ ರಾಷ್ಟ್ರವೆನಿಸಿದೆ. ಈ ಕಾರಣದಿಂದಾಗಿಯೇ ತಾಂತ್ರಿಕತೆಯನ್ನು ಇಂದಿನ ಜನತೆ ಹೆಚ್ಚಾಗಿ ಅನುಮೋದಿಸುತ್ತಿದ್ದಾರೆ.

ಆಧುನಿಕ ಯುಗದಲ್ಲಿ ತಾಂತ್ರಿಕ ಅಭಿವೃದ್ಧಿ ಅವಶ್ಯ ಎನ್ನುವವರ ಪ್ರಕಾರ "ಸ್ವಯಂ ಚಾಲಿತ ಯಂತ್ರವು ನೈಸರ್ಗಿಕ ಸಹವರ್ತಿ. ಇದು ಬದಲಾದ ಕೈಗಾರಿಕಾ ಕ್ರಾಂತಿಯ ಪರಿಣಾಮ. ಇದರಿಂದ ಆರ್ಥಿಕ ಹಾಗೂ ಸಾಮಾಜಿಕ ದುಷ್ಪರಿಣಾಮಗಳುಂಟಾಗುವುದು ಅಸಾಧ್ಯ. ಪ್ರಾರಂಭದಲ್ಲಿ ಈ ಯಂತ್ರಗಳಿಂದ ಸಲ್ಪಮಟ್ಟಿಗೆ ಅನಾನುಕೂಲ ಇರಬಹುದಾದರೂ ರಾಷ್ಟ್ರವನ್ನು ಪ್ರಗತಿಪಥದಲ್ಲಿ ಕೊಂಡೊಯ್ಯಲು ಇವುಗಳಿಗಿಂತಲೂ ಮುಖ್ಯ ಸಾಧನ ಬೇರೊಂದಿಲ್ಲ. ಇಂದು ನಾವು ಸ್ಪರ್ಧಾತ್ಮಕ ಪ್ರಪಂಚದಲ್ಲಿ ಜೀವಿಸುತ್ತಿರುವುದರಿಂದ ಅಧಿಕ ಪ್ರಮಾಣದಲ್ಲಿ ವಸ್ತುಗಳನ್ನು ಉತ್ಪಾದಿಸಬೇಕಾಗಿದೆ. ಈ ಕಾರ್ಯ ಬೃಹತ್‌ಪ್ರಮಾಣದ ಕೈಗಾರಿಕೆಗಳಿಂದ ಮಾತ್ರ ಸಾಧ್ಯ. ಆದ್ದರಿಂದ ತಾಂತ್ರಿಕತೆ ಅನಿವಾರ್ಯ."

ಇದಕ್ಕೆ ವಿರುದ್ಧವಾಗಿ ಅ ನೇ ಕ ರು ತಮ್ಮ ಟೀಕೆಗಳನ್ನು ಮಂಡಿಸಿದ್ದಾರೆ. ಅವರ ಪ್ರಕಾರ ಅಮೇರಿಕಾದಂತಹ ಅಭಿವೃದ್ಧಿಯುತ ರಾಷ್ಟ್ರಗಳ ಅನುಭವವನ್ನು ಗಣನೆಗೆ ತೆಗೆದುಕೊಂಡಲ್ಲಿ ಮೇಲಿನ ವಾದ ಸರಿಎನಿಸಬಹುದು. ಆ ದ ರೆ ಭಾರ ತಕ್ಕೂ ಅಮೇರಿಕಾ ದೇಶಕ್ಕೂ ಆನೆ-ಆಡಿಗೆ ಇರುವಷ್ಟೇ ವ್ಯತ್ಯಾಸವಿದೆ. ಅಮೇ ಕಾದಷ್ಟು ಸುಲಭವಾಗಿ ಭಾರತ ತಾಂತ್ರಿಕತೆಯನ್ನು ಹಾಸು ಹೊಕ್ಕಾಗಿಸಿಕೊಳ್ಳಲಾ ರದು. ಭಾರತದಂತಹ ಹಿಂದುಳಿದ ರಾಷ್ಟ್ರಗಳಲ್ಲಿ ಆಧುನಿಕ ತಾಂತ್ರಿಕತೆಯಿಂದ ಅನುಕೂಲಗಳುಂಟಾಗಬಹುದಾದರೂ ಅದರಿಂದ ಆ ರ್ಥಿ ಕ ಹಾಗೂ ಸಾಮಾಜಿಕ ಅ ಂ ಶ ಗ ಳ ಮೇಲೆ ದುಷ್ಪರಿಣಾಮಗಳು ಸಂಭವಿಸದಿರದು ಎಂದು ಹೇಳಲಾಗದು. ತಾಂತ್ರಿಕತೆಯಿಂದಾಗಿ ತಾಂತ್ರಿಕ ನಿರುದ್ಯೋಗ ಹೆಚ್ಚುವುದಲ್ಲದೆ, ಕೊಳಚೆ ಪ್ರದೇ ಶಗಳು ಅಧಿಕಗೊಳ್ಳುತ್ತವೆ. ಮುಷ್ಕರಗಳು ಉತ್ಪಾದನೆಯ ಕುಗ್ಗುವಿಕೆಗೆ ಕಾರಣ ವಾಗುತ್ತವೆ. ತಾಂತ್ರಿಕತೆಯನ್ನು ರಾ ಷ್ಟ್ರ ದ ಉತ್ಪಾದನಾ ಕ್ಷೇತ್ರದಲ್ಲಿ ಅಳವಡಿಸಿ ದಲ್ಲಿ ಅಧಿಕ ವಸ್ತುಗಳನ್ನು ಉತ್ಪಾದಿಸಬಹುದಾದರೂ, ಉತ್ಪಾದಿಸಲ್ಪಟ್ಟ ವಸ್ತುಗ ಳಿಗೆ ಬೇಡಿಕೆ ಬರದಿದ್ದಲ್ಲಿ ಆರ್ಥಿಕ ಸ್ಥಿರತೆ ಏರುಪೇರುಗಳಿಗೆ ಒಳಗಾಗುತ್ತದೆ. ಆದ್ದ ರಿಂದ ಅಧಿಕ ಪ್ರಮಾಣದ ತಾಂತ್ರಿಕತೆಯ ಬಳಕೆ ಅರ್ಥವ್ಯವಸ್ಥೆಯ ಸ್ಥಿರತೆಗೆ ಧಕ್ಕೆ ತಂದೊಡ್ಡುತ್ತದೆ. ತಾಂತ್ರಿಕ ಪ್ರಗತಿಯು ವಿರಾಮದ ಜನರನ್ನುಂಟು ಮಾಡುತ್ತದೆ. ಹೇಗೆಂದರೆ, ತಾಂತ್ರಿಕತೆಯಿಂದಾಗಿ ಜನರಿಗೆ ಹೆಚ್ಚಿನ ಕೆಲಸವಿಲ್ಲದೆ ಅ ವ ರು ತಮ್ಮ ಬಹುಪಾಲು ವೇಳೆಯನ್ನು ಹಾಯಾಗಿ, ಅಮೋದ ಪ್ರಮೋದಗಳಲ್ಲಿ ಕ ಳೆ ಯ ಬ ಹುದು ಎಂದು ಡಾಕ್ಟರ್ ಗ್ರೇಯರ್ಸ್ ಹೇಳಿದ್ದಾರೆ. ಕಾರ್ಮಿಕ ವರ್ಗದ ಮೇಲೆ ತಾಂತ್ರಿಕತೆ ಬೀರುವ ಪರಿಣಾಮ ಅತಿ ಮುಖ್ಯವಾದುದು. ತಾಂತ್ರಿಕತೆಯಿಂದಾಗಿ ಕಾರ್ಮಿಕರಿಗೆ ವೈಯಕ್ತಿಕ ಉತ್ತೇಜನ ಕೊಡುವುದು ಕಷ್ಟಸಾಧ್ಯವಾಗುತ್ತದೆ. ಇದು ಅವರ ದಕ್ಷತೆಯನ್ನು ಕುಗ್ಗಿಸುತ್ತದೆ ಅಲ್ಲದೆ ಸ್ವಯಂ ಚಾಲಿತ ಯಂತ್ರಗಳು ಇರುವ ಕಾರ್ಖಾನೆಗಳಲ್ಲಿ ದುಡಿಯಲು ಕಾರ್ಮಿಕರು ನಿರಾಸಕ್ತಿ ತಾಳುತ್ತಾರೆ. ಯಂತ್ರಗಳ ಬಳಕೆಯಿಂದಾಗಿ ಹೆಚ್ಚಿನ ಜ ನ ರಿ ಗೆ ಉದ್ಯೋಗಾವಕಾಶಗಳು ದೊರೆಯುವುದಿಲ್ಲ. ಪರಿಣಾಮವಾಗಿ ಉದ್ಭವಿಸುವ ನಿರುದ್ಯೋಗದ ಸಮಸ್ಯೆ ಕಾರ್ಮಿಕರಲ್ಲಿ ಭೀತಿಯನ್ನು ತಂದೊಡ್ಡುತ್ತದೆ. ಈ ಸಮಸ್ಯೆ ಮುಂದುವರಿದ ರಾಷ್ಟ್ರವಾದ ಅಮೇರಿಕಾದಲ್ಲೂ ಕಾಲ ಕ್ರಮೇಣ ಕಾಣಿಸಿಕೊಳ್ಳದಿರದು.

ಇದು ತಾಂತ್ರಿಕತೆಯನ್ನು ವಿರೋಧಿಸುವವರ ವಿಚಾರಸರಣಿ. ಮಹಾತ್ಮ ಗಾಂಧಿ ಯವರನ್ನೂ ಈ ಗುಂಪಿಗೆ ಸೇರಿಸಬಹುದಾದರೂ ಅವರು ಕಟ್ಟಾ ಯಂತ್ರವಿರೋಧಿಯಾ ಗಿರಲಿಲ್ಲ. ಯಂತ್ರವೇ ಬೇಡವೆಂದು ಗಾಂಧೀಜಿ ಎಂದೂ ಹೇಳಲಿಲ್ಲ. ಆದರೆ ಅದರ ದುರುಪಯೋಗ ಬೇಡವೆಂದು ಅವರು ಸದಾಹೇಳುತ್ತಿದ್ದರು. ಮಾನವನ ಬದುಕಿಗೆ ದಾರಿಯಾಗುವ ಉಪಕಾರಿ ಯಂತ್ರಗಳನ್ನು ಅವರು ಬಹುವಾಗಿಮೆಚ್ಚುತ್ತಿದ್ದರು.

ಇಂತಹ ಯಂತ್ರಗಳಲ್ಲಿ ಒಂದಾದ ಹೊಲಿಗೆಯಂತ್ರದ ಬಗ್ಗೆ ಅವರು ಹೇಗೆ ಹೇಳುತ್ತಿದ್ದರು ಇದರಲ್ಲಿ ಮಾನವ ಕೋಟಿಯ ಕಲ್ಯಾಣವಿದೆ. ಇದು ಬರಿಯ ಯಂತ್ರವಲ್ಲ. ಮಾನವನಿಗೆ ಜೀವನ ವೃತ್ತಿಯ ಬೆಳಕನ್ನು ತೋರಿಸುವ ಕಾಮಧೇನು. ಇಂತಹ ಯಂತ್ರ ಸೃಷ್ಟಿಯಾದಷ್ಟೂ ದೇಶಕ್ಕೆ ನಷ್ಟವೇನೂ ಇಲ್ಲ. ಸರಕಾರದ ಅಧೀನದಲ್ಲಿ ಇವುಗಳನ್ನು ತಯಾರಿಸುವ ಕಾರ್ಖಾನೆಗಳು ಹೆಚ್ಚಾಗಿ ಬೆಳೆಯಲಿ. ಚರಕವೂ ಒಂದು ಸೂಕ್ಷ್ಮವಾದ ಯಂತ್ರವೆಂದು ಗಾಂಧೀಜಿ ಹೇಳುತ್ತಿದ್ದರು. ಗಾಂಧೀಜಿ ಸರ್ವದಾ ಯಂತ್ರ ವಿರೋಧಿಯಾಗಿರಲಿಲ್ಲ ಎನ್ನುವುದಕ್ಕೆ ಅವರು ರೈಲು ಬಂಡಿ, ಗಡಿಯಾರ, ಟೆಲಿಫೋನ್ ಟೈಪ್‌ರೈಟರ್ ಮುಂತಾದವುಗಳನ್ನು ಉಪಯೋಗಿಸುತ್ತಿದ್ದುದೇ ಸಾಕ್ಷಿ. ಅವರು ಒಂದು ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ. ಭಾರತದ ದಟ್ಟದಾರಿದ್ರ್ಯ ಹಾಗೂ ನಿರುದ್ಯೋಗದ ಸಮಸ್ಯೆಗಳನ್ನು ಈ ಯಂತ್ರಗಳು ಹೊಡೆದೋಡಿಸುವ ಹಾಗಿದ್ದರೆ ಅತ್ಯಂತ ಹೆಚ್ಚಿನ ಮಟ್ಟದಲ್ಲಿ ನಾನು ಯಂತ್ರಗಳನ್ನು ಸಮರ್ಥಿಸಲು ಸಿದ್ಧನಿದ್ದೇನೆ. ಇದರಿಂದ ಗಾಂಧೀಜಿ ಯಂತ್ರಗಳಿಗೆ ಎಂದೂ ಪ್ರತಿಕೂಲವಾಗಿರಲಿಲ್ಲ ಎಂದು ಅರ್ಥವಾಗುತ್ತದೆ.

ಗಾಂಧೀಜಿ ಶಾಸ್ತ್ರಜ್ಞರಲ್ಲದಿದ್ದರೂ ದೊಡ್ಡ ವಿಚಾರವಂತರಾಗಿದ್ದರು. ಅವರು ತಮ್ಮ ಬದುಕನ್ನು ವಿಶ್ಲೇಷಿಸುವುದರೊಂದಿಗೆ ಸುತ್ತಲಿನ ಬದುಕಿನ ಮೂಲನೆಲೆಗಳನ್ನು ಅನುಭವ ಹಾಗೂ ಗಾಢಚಿಂತನೆಗಳಿಂದ ಅರಿತಿದ್ದರು. ಸತ್ಯ ಮತ್ತು ಅಹಿಂಸೆ ಅವರ ಬದುಕಿನ ಉಸಿರಾಗಿತ್ತು. ಗಾಂಧೀಜಿ ಅರ್ಥಶಾಸ್ತ್ರಜ್ಞರಲ್ಲ, ಅರ್ಥಶಾಸ್ತ್ರವನ್ನು ಆಳವಾಗಿ ಅಧ್ಯಯನಮಾಡಿದವರು ಅಲ್ಲ. ಆದರೂ ಅವರು ನೀಡಿರುವ ಹಲವಾರು ಆರ್ಥಿಕ ವಿಚಾರಗಳು ಯಾವ ಪ್ರಸಿದ್ಧ ಅರ್ಥಶಾಸ್ತ್ರಜ್ಞನಿಗೂ ಕಡಿಮೆಯಿಲ್ಲ ಉದ್ಯೋಗ ಪ್ರಧಾನವಾದ ಬದುಕು ಮಾತ್ರ ಮನುಷ್ಯನ ಸುಖಸಂತೋಷಗಳಿಗೆ ಮುಖ್ಯ ಆಧಾರವಾಗಿರ ಬಲ್ಲದು ಎಂದು ನಂಬಿದ ವ್ಯಕ್ತಿ ಗಾಂಧೀಜಿ. ಅವರ ಪ್ರಕಾರ ಇಂತಹ ದುಡಿಮೆಗೆ ಪ್ರಾಶಸ್ತ್ಯವಿರುವ ಬದುಕಿನಲ್ಲಿ ಶೋಷಣೆಗೆ ಎಡೆ ಇಲ್ಲ. ಆದ್ದರಿಂದಲೇ ಕೆಲಸವಿಲ್ಲದೆ, ಬದುಕನ್ನು ಎದುರಿಸಲಾರದೆ ಒದ್ದಾಡುತ್ತಿದ್ದ ಕೋಟಿಗಟ್ಟಲೆ ಜನರಿಗೆ ಉದ್ಯೋಗಗಳನ್ನು ಒದಗಿಸುವಬಗ್ಗೆ ಗಾಂಧೀಜಿ ತಮ್ಮ ಚಿಂತನೆ ಹರಿಸಿದರು. ಅದಕ್ಕಾಗಿ ತಮ್ಮ ಜೀವಮಾನವೆಲ್ಲ ದುಡಿದರು.

ಯಾವುದೇ ರಾಷ್ಟ್ರದಲ್ಲಿ, ಯಾವುದೇ ಕಾಲದಲ್ಲಿ ಕೈಗಾರಿಕಾಕರಣ ಅತ್ಯಾವಶ್ಯಕ ಎಂಬುದಾಗಿ ಗಾಂಧೀಜಿ ನಂಬಿರಲಿಲ್ಲ. ಬದುಕನ್ನು ಸುಧಾರಿಸಲು ಸಾಧನವಾಗುವಂತಹ ವಿಕೇಂದ್ರಿತ ಉದ್ಯೋಗ ಯಂತ್ರಗಳನ್ನು ಅವರು ಸದಾಕಾಲವೂ ಸ್ವಾಗತಿಸುತ್ತಿದ್ದರು. ಆದರೆ ಲಕ್ಷಾಂತರ ಕಾರ್ಮಿಕರ ಉದ್ಯೋಗಗಳನ್ನು ಕಸಿದುಕೊಂಡು ಅವರ ಹಿತವನ್ನು ಬಲಿಕೊಟ್ಟು ಕೆಲವೇ ಶ್ರೀಮಂತರ ಕೈಯಲ್ಲಿ ಸಂಪತ್ತನ್ನೆಲ್ಲಾ

ಕೇಂದ್ರೀಕರಿಸಿ ಅವರ ಹಿತವನ್ನು ಸಾಧಿಸುವ ಕೇಂದ್ರೀಕೃತ ದೊಡ್ಡ ಯಂತ್ರಗಳನ್ನು ಅವರು ವಿರೋಧಿಸುತ್ತಿದ್ದರು. ಕೈಗಾರಿಕಾಕರಣದಿಂದ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಎಂಬ ಭಯ ಗಾಂಧೀಜಿಯವರಿಗಿತ್ತು. ಆದ್ದರಿಂದಲೇ ಅವರು 'ಸ್ವರಾಜ್ಯ ನಮ್ಮ ರಾಷ್ಟ್ರದ ಪ್ರತಿಭೆಯನ್ನು ನಿಜವಾಗಿ ಪ್ರತಿಬಿಂಬಿಸಬೇಕಾದರೆ ಭಾರಿ ಕೈಗಾರಿಕಾಕರಣಕ್ಕೆ ಮಿತಿ ಹಾಕಬೇಕು. ಸಮಾಜದ ವೆಚ್ಚದಲ್ಲಿ ಕೆಲವೇ ಜನರು ಶ್ರೀಮಂತರಾಗುವುದು ನನಗೆ ಇಷ್ಟವಿಲ್ಲ. ಹೆಚ್ಚಿನಮಟ್ಟದ ತಾಂತ್ರಿಕತೆಯಿಂದಾದ ಉತ್ಪಾದನೆಯು ಸಂಪತ್ತಿನ ಹಾಗೂ ಶಕ್ತಿಯ ಕೇಂದ್ರೀಕರಣಕ್ಕೆ ದಾರಿ ಮಾಡಿಕೊಡುತ್ತದೆ. ಮನುಷ್ಯನ ವ್ಯಕ್ತಿತ್ವಕ್ಕೇ ಅಡ್ಡಬರುವ, ಅವನ ಜೊತೆ ಪೈಪೋಟಿಗೆ ನಿಲ್ಲುವ ಯಂತ್ರಗಳನ್ನು ನಾನು ದ್ವೇಷಿಸುತ್ತೇನೆ. ಸಾವಿರಾರು ಜನರ ಆಹಾರವನ್ನು ಕಸಿದು, ಅವರ ಬೆನ್ನ ಮೇಲೆ ಕೆಲವೇ ಶ್ರೀಮಂತರು ಸವಾರಿ ಮಾಡಲು ಯಂತ್ರಗಳು ನೆರವಾಗುವುದನ್ನು ನಾನು ವಿರೋಧಿಸುತ್ತೇನೆ, ಎಲ್ಲರ ಕೈಯಲ್ಲಿ ಹಣ ಸೇರಬೇಕೆಂಬುದು ನನ್ನ ಬಯಕೆ. ಸಕಲರ ಹಿತವನ್ನು ಸಾಧಿಸುವ ಪ್ರತಿಯೊಂದು ವೈಜ್ಞಾನಿಕ ಶೋಧನೆಗೂ ನನ್ನ ಯೋಜನೆಯಲ್ಲಿ ಸ್ಥಾನವಿದೆ. ನನಗೆ ಮುಖ್ಯವಾಗಿ ಬೇಕಾದ್ದು ರಾಷ್ಟ್ರದ ಕಲ್ಯಾಣ. ಅದು ಸಾಧ್ಯವಾಗಬೇಕಾದರೆ ರಾಷ್ಟ್ರದ ಸಂಪತ್ತಿನಲ್ಲಿ ಸಮಾನತೆ ಬರಬೇಕು. ಇದಕ್ಕಾಗಿ ಆರ್ಥಿಕ ಪುನರುದ್ಧಾರವಾಗಬೇಕು. ಯಂತ್ರಗಳಿಗೆ ಜೋತುಬೀಳುವ ಪ್ರವೃತ್ತಿ ಮಾಯವಾಗಿ ವ್ಯಕ್ತಿಗೆ ಪೂರ್ಣ ಸ್ವಾತಂತ್ರ್ಯ ದೊರೆಯಬೇಕು. ಯಂತ್ರಗಳ ಪುನರುಜ್ಜೀವನವಾಗಬೇಕು, ಅವು ಸ್ವಯಂ ಪರಿಪೂರ್ಣತೆಯನ್ನು ಹೊಂದುವಂತಾಗಬೇಕು".

ಗಾಂಧೀಜಿ ಸರಳವಾದ, ನೀತಿಯುತವಾದ ಬದುಕಿಗೆ ಹೆಚ್ಚಿನ ಮಾನ್ಯತೆ ನೀಡಿದ್ದರು. ಅವರು ಯಾವತ್ತೂ ಗುಣಕ್ಕೆ ಗೌರವ ಕೊಡುತ್ತಿದ್ದರೇ ಹೊರತು ಹಣಕ್ಕಲ್ಲ, ಪ್ರಾಮಾಣಿಕ ಬದುಕಿಗೆ ಕೈಕಸುಬೇ ದಾರಿ ಎನ್ನುವುದು ಅವರ ಧ್ಯೇಯವಾಗಿತ್ತು. ಸತ್ಯಾಗ್ರಹ, ಆಂದೋಲನಗಳನ್ನು ಹೂಡಿದರೂ ಸರಳವಾದ, ರಚನಾತ್ಮಕವಾದ ಕಾರ್ಯಗಳನ್ನು ಮರೆಯದೆ ಅನುಷ್ಠಾನಕ್ಕೆ ತರುತ್ತಿದ್ದುದು ಗಾಂಧೀಜಿಯವರ ವೈಶಿಷ್ಟ್ಯವಾಗಿತ್ತು. ಭಾರತ ಬಂಡವಾಳ ಪ್ರಧಾನ ರಾಷ್ಟ್ರವಲ್ಲ. ಧಾರಾಳಶ್ರಮ ಶಕ್ತಿಯುಳ್ಳ ರಾಷ್ಟ್ರ ಎಂಬುದು ಪ್ರತಿಯೊಬ್ಬರೂ ಒಪ್ಪತಕ್ಕ ಮಾತು. ಅದಕ್ಕೆಂದೇ ಗಾಂಧೀಜಿ ಬಂಡವಾಳ ಬಾಹುಳ್ಯದ ಉದ್ದಿಮೆಗಳನ್ನು ಸ್ಥಾಪಿಸುವ ಬದಲು ಕಾರ್ಮಿಕ ಬಾಹುಳ್ಯ ಉದ್ಧಿಮೆಗಳನ್ನು ಅಂದರೆ ಗ್ರಾಮೀಣ ಕೈಗಾರಿಕೆಗಳನ್ನು ಸ್ಥಾಪಿಸುವುದು ಒಳ್ಳೆಯದು ಎಂದು ಅಭಿಪ್ರಾಯಪಟ್ಟಿದ್ದರು. ಅತ್ಯಲ್ಪ ಬಂಡವಾಳದಿಂದ ಹೆಚ್ಚಿನ ಉದ್ಯೋಗ ಕಲ್ಪಿಸುವ ಮಾರ್ಗ ಇದೆಂದು ಅವರು ಹೇಳು ಹೇಳುತ್ತಿದ್ದರು. ಮನುಷ್ಯ ಯಂತ್ರಕ್ಕೆ ದಾಸನಾಗುವುದನ್ನು, ಯಂತ್ರಗಳ ಅಬ್ಬರದಲ್ಲಿ ಮಾನವೀಯತೆ ನಲುಗಿ ಹೋಗುವುದನ್ನು ಮಾತ್ರ ಅವರು ಸಹಿಸಲಿಲ್ಲ. ಜನಬಲವೇ ಮುಖ್ಯ ಆಧಾರವಾಗಿರುವ ಭಾರತದಲ್ಲಿ ಯಂತ್ರ ವ್ಯವಸ್ಥೆ ತಂದರೆ ಅಪಾ

ಯಕ್ಕೆ ದಾರಿಮಾಡಿಕೊಟ್ಟಂತೆಯೇ ಸರಿ. ಏಕೇದರೆ ಯಂತ್ರಗಳೇ ಎಲ್ಲಾ ಕೆಲಸಗಳನ್ನೂ ನಿರ್ವಹಿಸಿದಾಗ, ದುಡಿಯುವ ಕೆಲಸಗಾರರಿಗೆ ಕೆ ಲ ಸ ವಿ ಲ್ಲ ದೆ ಅವರು ಸಮಾಜಕ್ಕೆ, ರಾಷ್ಟ್ರಕ್ಕೆ ಮಾರಕವಾಗ.ವುದು ಅಸಹಜವಲ್ಲ" ಎಂದು ಗಾಂಧೀಜಿ ಹೇಳುತ್ತಿದ್ದರು. ಈ ಉದ್ದೇಶದಿಂದಲೇ ಅವರು ಸಾಮಾನ್ಯ ಕಾರ್ಮಿಕನ ದಕ್ಷತೆಯನ್ನು ಹೆಚ್ಚಿಸಲು ನೆರವಾಗುವ ಸರಳ ಯಂತ್ರಗಳ ಕಡೆ ತಮ್ಮ ಗಮನ ಹರಿಸಿದರು. ಗ್ರಾಮ ಪ್ರಧಾನ, ಉದ್ಯೋಗ ಪ್ರಧಾನ ಹಾಗೂ ವಿಕೇಂದ್ರಿಕೃತ ಸಮಾಜ ವ್ಯವಸ್ಥೆಯನ್ನು ರೂಪಿಸಲು ಶ್ರಮಿಸಿದರು. ಅವರ ಪ್ರಕಾರ ಸ ರ ಳ ಯಂತ್ರಗಳು ಕಾ ರ್ಮಿ ಕ ರಿ ಗೆ ಉ ದ್ಯೋ ಗ ಕ ಲ್ಪಿ ಸಿ ಕೊ ಟ್ಟು, ಅಧಿಕ ವಸ್ತುಗಳನ್ನು ಉ ತ್ಪಾ ದಿ ಸ ಲು ನೆರವಾಗುವುದರೊಂದಿಗೆ ಅವರ ಕೆ ಲ ಸ ವ ನ್ನೂ ಹಗುರ ಮಾ ಡು ವ ಅತ್ಯುತ್ತಮ ಸಾಧನಗಳು. ಹ ಳ್ಳಿ ಗ ಳ ದೇ ಶ ವಾ ದ ಭಾರತ ಪ್ರಗತಿಯ ಮೆಟ್ಟಿಲುಗಳನ್ನು ಹತ್ತಬೇಕಾದರೆ ಮೊದಲು ಹಳ್ಳಿಗಳ ಉದ್ಧಾರವಾಗಬೇಕು. ಇದು ಸಾಧ್ಯವಾಗಿ, ಗ್ರಾಮಾಂತರ ಪ್ರದೇಶಗಳಲ್ಲಿ ಆರ್ಥಿಕಸ್ವಾತಂತ್ರ್ಯದ ಬೆಳಕು ಮೂಡಬೇಕಾದರೆ ಗ್ರಾಮೀಣ ಕೈ ಗಾ ರಿ ಕೆ ಗ ಳು ಹೆಚ್ಚಾಗಿ ಅಭಿವೃದ್ಧಿ ಹೊಂದಬೇಕು. ಈ ಕೈಗಾರಿಕೆಗಳು ರಾಷ್ಟ್ರದ ಅರ್ಥವ್ಯವಸ್ಥೆಯ ಮೂಲ ತಳಹದಿಯಾಗಬೇಕು ಎಂದು ಗಾಂಧೀಜಿಯವರು ಆಶಿಸಿದರು. ತಾವು ಹೇಳಿದ್ದನ್ನು ಸ್ವತಃ ಆಚರಣೆಗೆ ತರುತ್ತಿದ್ದುದು ಗಾಂಧೀಜಿಯವರ ಜೀವನದ ಮುಖ್ಯ ತತ್ವವಾಗಿತ್ತು. ಮೊದಲು ಮಾಡು, ನಂತರ ಹೇಳು ಎನ್ನುವುದನ್ನು ಅವರು ಚೆನ್ನಾಗಿ ಅಳವಡಿಸಿಕೊಂಡಿದ್ದರು. ಸ್ವತಃ ನೂಲನ್ನು ತೆಗೆದು ಮಗ್ಗದಿಂಡ ನೆಯ್ದ ಬಟ್ಟೆಯನ್ನು ಅವರು ತೊಡುತ್ತಿದ್ದರು. ಅಖಿಲಭಾರತ ನೂಲುವವರ ಸಂಸ್ಥೆ, ಅಖಿಲಭಾರತ ಗ್ರಾಮ ಕೈಗಾರಿಕೆಗಳನ್ನು ಸ್ಥಾಪಿಸಿ ಅವುಗಳ ಮೂಲಕ ಗ್ರಾಮ ಕೈಗಾರಿಕೆಗಳ ಬೆಳವಣಿಗೆಗೆ ಅತ್ಯವಶ್ಯಕವಾದ ತಾಂತ್ರಿಕ ಹಾಗೂ ಸಂಘಟನಾ ನೈಪುಣ್ಯತೆಯನ್ನು ಒದಗಿಸಲು ಶ್ರಮಿಸಿದರು. ಹ ಳ್ಳಿ ಹ ಳ್ಳಿ ಗೂ ಹೋಗಿ ಗ್ರಾಮಕೈಗಾರಿಕೆಗಳ ಮಹತ್ವವನ್ನು, ಸ್ವಾವಲಂಬನೆಯ ಅಗತ್ಯತೆಯನ್ನು ಜನರಿಗೆ ಮನಮುಟ್ಟುವಂತೆ ತಿಳಿಯಪಡಿಸಿದರು. ಇದರಿಂದಾಗಿ, ಅನೇಕರು. ಗಾಂಧೀಜಿಯವರನ್ನು 'ಎತ್ತಿನ ಗಾಡಿಯ ಯುಗದವರು' ಎಂದು ಟೀಕಿಸಿದರು. ಆದರೆ ಗಾಂಧೀಜಿ ಈ ಅರ್ಥದಲ್ಲಿ ಎಂದೂ ಯಂತ್ರಗಳ ಕಡು ವಿರೋಧಿಯಾಗಿರಲಿಲ್ಲ. ಆದರೆ ಅವರು ಅತಿ ತಾಂತ್ರಿಕತೆಯ ಹುಚ್ಚನ್ನು ಮಾತ್ರ ವಿರೋಧಿಸುತ್ತಿದ್ದರು. ಈ ಹುಚ್ಚು ಮಾನವಶ್ರಮವನ್ನು ನಿರರ್ಥಕಗೊಳಿಸಿ ನಿರುದ್ಯೋಗವನ್ನು ತಂದೊಡ್ಡುತ್ತದೆ ಎಂದು ಅವರು ಹೇಳುತ್ತಿದ್ದರು. ಜನರನ್ನು ನಿರುದ್ಯೋಗದತ್ತ ದೂಡದೇ, ಅವರ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸುವ ಸೂಕ್ತ ತಾಂತ್ರಿಕತೆಯನ್ನು ಬಳಸಬೇಕೆಂಬುದು ಗಾಂಧೀಜಿಯವರ ಅಭಿಲಾಷೆಯಾಗಿತ್ತು ಬೃಹತ್ ಕೈಗಾರಿಕೆಗಳನ್ನು ಬೆಂ ಬ ಲಿ ಸ ದೆ ಕೇವಲ ಗ್ರಾಮೀಣ ಕೈಗಾರಿಕೆಗಳನ್ನೇ ಅವರು ಪ್ರೋತ್ಸಾಹಿಸುತ್ತಿದ್ದುದಕ್ಕೆ ಮುಖ್ಯ ಕಾರಣ ಬೃಹತ್ ಕೈಗಾರಿಕೆಗಳಿಂದ

ನಿರುದ್ಯೋಗ ಸಮಸ್ಯೆ ಬೆಳೆಯುತ್ತದೆ ಎಂದು ಅವರು ನಂಬಿದ್ದುದು. ಅವರ ಪ್ರಕಾರ 'ಬೃಹತ್ ಕೈಗಾರಿಕೆಗಳಿಂದ ಪಟ್ಟಣಗಳಿಗೆ ಉಪಯೋಗವಾದರೂ ಹಳ್ಳಿಗಳಂತೂ ಅದರಿಂದ ಹಾನಿಯೇ. ಈ ಕೈಗಾರಿಕೆಗಳು ಹಳ್ಳಿಯ ಜನರನ್ನು ಪಟ್ಟಣದೆಡೆಗೆ ಓಡಿಸುತ್ತವೆ. ಈ ವಲಸೆ ನಿಲ್ಲಬೇಕಾದರೆ ಹಳ್ಳಿಯ ಜನರಿಗೆ ಹಳ್ಳಿಯಲ್ಲೇ ಉದ್ಯೋಗ ದೊರೆಯುವಂತಾಗಬೇಕು. ಬೃಹತ್ ಯಂತ್ರವು ಪ್ರತ್ಯೇಕ ಸ್ಥಾನವನ್ನು ಹೊಂದಿದೆ ಎನ್ನುವುದನ್ನು ಅಲ್ಲಗಳೆಯಲಾಗದು. ಆದರೆ ಅದು ಲಕ್ಷಾಂತರ ಜನರನ್ನು ಉದ್ಯೋಗ ರಹಿತರನ್ನಾಗಿ ಮಾಡುತ್ತದೆ ಎನ್ನುವುದೂ ಅಷ್ಟೇ ಸತ್ಯ. ಆದರೆ ಗ್ರಾಮಕೈಗಾರಿಕೆಗಳಿಗೆ ಈ ಮಾತು ಅನ್ವಯಿಸುವುದಿಲ್ಲ. ಭಾರತದ ಲಕ್ಷ ಲಕ್ಷ ಹಳ್ಳಿಗಳಲ್ಲಿ ಸುಖ ಶಾಂತಿ, ಸಮೃದ್ಧಿಗಳು ನೆಲೆಗೊಳ್ಳಬೇಕಾದರೆ ಹಳ್ಳಿಗಳಲ್ಲಿ ಗ್ರಾಮಕೈಗಾರಿಕೆಗಳು ನೆಲೆಗೊಳ್ಳಬೇಕು. ಹ ಳ್ಳಿ ಗ ಳು ಕೈಗಾರಿಕಾ ಕೇಂದ್ರಗಳಾದಾಗಲೇ ಈ ಉದ್ದೇಶ ನೆರವೇರಲು ಸಾಧ್ಯ." ಅಧಿಕ ಉತ್ಪಾದನೆಯು ಆಧುನಿಕ ತಂತ್ರಜ್ಞಾನದ ಕೊಡುಗೆ ಎಂಬುದನ್ನು ಗಾಂಧೀಜಿ ನಂಬಿರಲಿಲ್ಲ. ಅಧಿಕ ಉತ್ಪಾದನೆ ಜನರ ಜೀವನಮಟ್ಟವನ್ನು ಹೆಚ್ಚಿಸುವುದಕ್ಕಿಂತಲೂ ವಿಶ್ವದ ಬಿಕ್ಕಟ್ಟಿಗೆ ಕಾರಣವಾಗುತ್ತದೆ ಎಂದು ಅವರು ಹೇಳುತ್ತಿದ್ದರು. ಆದರೆ ತಾಂತ್ರಿಕ ಜ್ಞಾನವನ್ನು ಒಂದು ಮಿತಿಯಲ್ಲಿ ಗ್ರಾಮಾಂತರಪ್ರದೇಶಗಳಿಗೆ ಹರಿಸುವುದಕ್ಕೆ ಗಾಂಧೀಜಿಯವರ ವಿರೋಧವೇನೂ ಇರಲಿಲ್ಲ. ಗ್ರಾಮಾಂತರ ಆರ್ಥಿಕ ವ್ಯವಸ್ಥೆಯ ಮೇಲೆ ಇದರಿಂದ ಮಹತ್ತರ ಪರಿಣಾಮ ಉಂಟಾಗಬಹುದು ಎಂದು ಅವರು ಒಪ್ಪಿದ್ದರು. ಕೈಯಿಂದ ತಯಾರಿಸಲಸಾಧ್ಯವಾದುದಕ್ಕೆ ಮಾತ್ರ ಯಂತ್ರಗಳನ್ನು ಬಳಸಬಹುದೇ ಹೊರತು ಸಾಧ್ಯವಾಗುವ ಯಾವ ವಸ್ತುವಿಗೂ ಯಂತ್ರದ ಬೆಂಬಲ ಇರಕೂಡದು ಎಂಬುದು ಅವರ ಮುಖ್ಯ ಅಭಿಪ್ರಾಯವಾಗಿತ್ತು.

ಇಂದು ವಿಶ್ವದ ಹಲವಾರು ಮುಂದುವರಿದ ರಾಷ್ಟ್ರಗಳೂ ಗಾಂಧೀಜಿಯವರ ಆರ್ಥಿಕ ವಿಚಾರಗಳಿಗೆ ಮನ್ನಣೆ ಕೊಡುತ್ತಿವೆ. ಆದರೆ ಭಾರತ ಅವರ ತಾಂತ್ರಿಕತೆಯ ವಾದವನ್ನು ಎಷ್ಟರಮಟ್ಟಿಗೆ ಪುರಸ್ಕರಿಸುತ್ತಿದೆ ಎನ್ನುವುದು ನಮಗೆ ಮುಖ್ಯ. ಇಪ್ಪತ್ತನೆಯ ಶತಮಾನದಲ್ಲಿ ಇತಿಹಾಸವನ್ನು ರೂಪಿಸಿದ ಸ್ವಾತಂತ್ರ್ಯಶಿಲ್ಪಿಯಾಗಿ ನಾವು ಗಾಂಧೀಜಿಯವರನ್ನು ಗೌರವಿಸುತ್ತಿದ್ದೇವೆ, ನಿಜ. ಆದರೆ ಅವರ ಕನಸನ್ನು ನನಸಾಗಿಸುವ ಪ್ರಯತ್ನದಲ್ಲಿ ನಾವು ಸಫಲತೆ ಪಡೆದಿದ್ದೇವೆಯೇ, ಅವರು ಬಯಸಿದ ದುಡಿಮೆಯ ಸ್ವಾವಲಂಬಿ ಜೀವನವನ್ನು ಇಂದು ನಾವು ನಡೆಸುತ್ತಿದ್ದೇವೆಯೇ ಎಂದು ಪ್ರಶ್ನಿಸಿಕೊಂಡಾಗ ಮಾತ್ರ ದೊರೆಯುವ ಉತ್ತರ ಶೂನ್ಯ. ಬದುಕನ್ನು ಎತ್ತರದ ಮಟ್ಟಕ್ಕೆ ಕೊಂಡೊಯ್ಯುವ ಭ್ರಮೆಯಲ್ಲಿ ನಾವು ಅವರ ಜೀವನದ ಮೂಲ ತತ್ವಗಳನ್ನು ಗಾಳಿಗೆ ತೂರಿದ್ದೇವೆ. ಹಿಂದೊಮ್ಮೆ ಗಾಂಧೀಜಿ ಶಂಕಿಸಿದ್ದ ಭಯ ಇಂದು ನಿಜವಾಗಿ ನಮ್ಮನ್ನೇ ಕಬಳಿಸಲು ಯತ್ನಿಸುತ್ತಿರುವಂತೆ ತೋರುತ್ತಿದೆ, ನಾವೇ ಕೈಯಾರೆ ಸೃಷ್ಟಿ ಮಾಡಿದ ಯಂತ್ರವ್ಯವಸ್ಥೆಯು ಅದಕ್ಕೆ ಪ್ರ ತಿ ಯಾ ಗಿ ಹೆ ಚ್ಚು

ದಾರಿದ್ರ್ಯ, ಹೆಚ್ಚು ನಿರುದ್ಯೋಗ, ಹೆಚ್ಚು ಶೋಷಣೆ, ಮಲಿನತೆ, ಅಸಮತೆ ಇತ್ಯಾದಿಗಳನ್ನು ಸೃಷ್ಟಿಮಾಡಿದೆ. ಇದಕ್ಕೆ ಮುಖ್ಯ ಕಾರಣ ಸರಳತೆಯನ್ನು ಮರೆತು, ಆಡಂಬರ, ವೈಭವಗಳನ್ನು ನಾವು ಬೆನ್ನಟ್ಟಿಹೋದದ್ದು. 'ದೂರದ ಬೆಟ್ಟ ನುಣ್ಣಗೆ' ಎನ್ನುವ ನಗ್ನಸತ್ಯ ಇಂದು ನಮಗೆ ಅರಿವಾಗಿದೆ. ಗಾಂಧೀಜಿಯವರನ್ನು ಪೂಜಿಸಿ, ಭಾಷಣಗಳ ಮೂಲಕ ಅವರನ್ನು ಹಾಡಿಹೊಗಳುವ ನಾವು ಅವರ ಮಾರ್ಗವನ್ನು ಅನುಸರಿಸಿದಲ್ಲಿ ಮಾತ್ರ ನಮ್ಮ ಸಮಸ್ಯೆಗಳಿಗೆ ಪರಿಹಾರ ದೊರೆಯಲು ಸಾಧ್ಯ ಎನ್ನುವ ಪಾಠವನ್ನು ನಾವು ಇಂದು ಕಲಿಯಬೇಕಾಗಿದೆ. ಮಾನವಶಕ್ತಿಯ ಸದುಪಯೋಗಕ್ಕೆ ಹೇರಳ ಅವಕಾಶ ಕೊಟ್ಟು, ಪ್ರತಿ ಹಳ್ಳಿಯೂ ಸ್ವಾವಲಂಬಿಯಾಗಿ, ಉದ್ಯೋಗಪರವಾದಾಗ ಮಾತ್ರ ನಮ್ಮ ಸ್ವಾತಂತ್ರ್ಯ ಗಟ್ಟಿಯಾಗಿ ನೆಲೆಗೊಂಡು ಭಾರತ, ಭಾರತವಾಗಿಯೇ ಉಳಿದು ಗಾಂಧೀಜಿಯವರ ರಾಮರಾಜ್ಯದ ಕನಸು ನನಸಾಗಲು ಸಾಧ್ಯ. ●

7 ನೇ ಪುಟದಿಂದ

ರುವನ್ನೇ ನಂಬಿದ ಸಣ್ಣ ಹಿಡುವಳಿದಾರರು, ಕೃಷಿ ಕಾರ್ಮಿಕ ವರ್ಗ ಕಣ್ಣೀರಿನ
ಗಳು ತಿನ್ನುವಂತಾಗಿದೆ. ಶೋಚನೀಯ ಈ ಶೋಚನೀಯ ಪರಿಸ್ಥಿತಿಯನ್ನು
ಹೋಗಲಾಡಿಸಬಲ್ಲ ಸಾಮಾಜಿಕ ಕ್ರಾಂತಿ ಪುರುಷರನ್ನು ಜನತೆ ಎದುರು ನೋಡುತ್ತಿ
ಯೆಂದರೆ ತಪ್ಪಲ್ಲ. ಇದಕ್ಕೆಲ್ಲ ಮದ್ದು, ಗ್ರಾಮಾಂತರ ಪ್ರದೇಶದಲ್ಲಿ ಗುಡಿಕೈಗಾ
ಕೆಗಳಿಗೆ ಪ್ರೋತ್ಸಾಹ ಕೊಡುವುದು, ಹಣದುಬ್ಬರ ತಡೆಗಟ್ಟಿ ಅಪಾರ ಐಶ್ವರ್ಯ
ರ್ವಜನಿಕರಲ್ಲಿ ಸಂಗ್ರಹಗೊಳದಂತೆ ನೋಡಿಕೊಳ್ಳುವುದು, ಕಟ್ಟುನಿಟ್ಟಾಗಿ ಎಲ್ಲ
ತಿಯ ಕರಗಳನ್ನು ವಸೂಲು ಮಾಡಿ ಆ ಹಣದಿಂದ ವ್ಯವಸಾಯಕ್ಕೆ, ವ್ಯವಸಾಯ
ರ್ಮಿಕ ವರ್ಗಕ್ಕೆ ಗಣನೀಯ ಪ್ರಮಾಣದಲ್ಲಿ ಸಹಾಯ ಸಲ್ಲಿಸುವುದು. ಇವೇ
ೊದಲಾದ ರಚನಾತ್ಮಕ ಕಾರ್ಯಗಳಿಗೆ ಸಮರ್ಥ, ಸರಕಾರ ಹುಟ್ಟಿಕೊಳ್ಳದಿದ್ದರೆ
ೇಶದ ಪರಿಸ್ಥಿತಿ ವಿಕೋಪಕ್ಕೆ ಹೋಗುವುದರಲ್ಲಿ ಯಾವ ಅನುಮಾನವೂ ಇಲ್ಲ.
ದರೆ ಇಂದಿನ ಆಳುವ ಪಕ್ಷಗಳು ಅನುಸರಿಸುತ್ತಿರುವ ರಾಜಕೀಯ ಚದುರಂಗದಾ
ದಲ್ಲಿ ಅಂಥ ಕ್ರಾಂತಿ ಸಾಧ್ಯವೇ ? ವಿಚಾರಶೀಲರು ಈ ಬಗ್ಗೆ ಯೋಚಿಸಿ ಪರಿ
ಾರವನ್ನೇ ಕಾಣದಂತ ಗೊಂದಲಕ್ಕೆ ಒಳಗಾಗಿದ್ದಾರೆ. ಇಂಥ ವಿಪ್ಲವ ಕಾಲವನ್ನು
ಮೃದ್ಧ ಕಾಲವನ್ನಾಗಿಸುವ ಅದ್ಭುತ ಶಕ್ತಿ ಸಂಪನ್ನ ನಾಯಕತ್ವದ ಕಷ್ಟಸಿಷ್ಟುರ
ಳಿಗೆ ಎದೆಗೊಡೆ ರಾಷ್ಟ್ರಾಭ್ಯುದಯ ದೃಷ್ಟಿಯ ಯಾವ ಪುರುಷರ ಅವಕಾಶ ಎಂದಾ
ೇತು. ಇದೇ ಇಂದಿನ ಜನತೆ ಎದುರು ನೋಡುವ ನೋಟವಾಗಿದೆ.

---

10 ನೇ ಪುಟದಿಂದ

೯೩೨ ರಿಂದ ೪೨ರವರೆಗೆ ಅದರ ಕೋಶಾಧಿಕಾರಿಗಳಾಗಿ, ೩೫ರಿಂದ ೪೨ರವರೆಗೆ
. ಸಾ. ಪ. ಪತ್ರಿಕೆಯ ಸಂಪಾದಕರಾಗಿದ್ದರು. ಅನಂತರ ೧೯೫೫ರಲ್ಲೂ
ರಿಷತ್ ಪತ್ರಿಕೆ ಕನ್ನಡ ನುಡಿಗಳ ಸಂಪಾದಕರಾಗಿದ್ದರು. ೧೯೫೩ರಲ್ಲಿ ಕುಮಟಾದಲ್ಲಿ
ಡೆದ ಸಾಹಿತ್ಯಸಮ್ಮೇಳನಾಧ್ಯರಾಗಿದ್ದರು. ೧೯೬೧ರಲ್ಲಿ ಕಾರವಾರದಲ್ಲಿ ನಡೆದ
ಾಹಿತ್ಯಸಮ್ಮೇಳನದಲ್ಲಿ ಕವಿಗೋಷ್ಠಿಯ ಅಧ್ಯಕ್ಷರಾಗಿದ್ದರು. ಮದರಾಸಿನ ಹಿಂದೂ
ತ್ರಿಕೆಯ ಕಾವ್ಯಾಲೋಕನ ವಿಭಾಗದಲ್ಲಿ ಇವರ ಅನೇಕವರ್ಷಗಳ ಸೇವೆ ಪ್ರಶಂಸ
ೀಯ. ಇಂಥ ಬಹುಮುಖ ಸೇವೆಯ ಈ ಮಹಾನೀಯರಿಗೆ ಕನ್ನಡಿಗರು ೧೯೭೦
ಲ್ಲಿ ಬೆಂಗಳೂರು ಪಟ್ಟಣ್ಣಚೆಟ್ಟಿ ಪುರಭವನದಲ್ಲಿ ಸನ್ಮಾನಿಸಿದರು.

ಇಂಥ ಉತ್ತಮ ಬೋಧಕ, ಕವಿ, ವಿಮರ್ಶಕ, ಅರ್ಥಶಾಸ್ತ್ರಜ್ಞ, ರಾಜ್ಯ
ಾಸ್ತ್ರಜ್ಞ, ಇಂಗ್ಲೀಷ್, ಕನ್ನಡಭಾಷೆ ಮತ್ತು ಸಾಹಿತ್ಯಬಲ್ಲಿದ ಡಾ.ವಿ.ಸೀಯವರು
-೯-೭೪ರ ಬೆಳಿಗ್ಗೆ ತಮ್ಮ ೮೨ನೆಯವಯಸ್ಸಿನಲ್ಲಿ ನಿಧನರಾದುದು ಕನ್ನಡನಾಡಿನ
ೌಷ್ಟನಷ್ಟ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಸಿದ್ಧಗಂಗಾ ಮಾಸಪತ್ರಿಕೆ ಹಾರೈ
ತ್ತ ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

